KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೪೫ | ಬೆಂಗಳೂರು, ಗುರುವಾರ, ಜೂನ್ ೧೭, ೨೦೧೦ (ಜ್ಯೇಷ್ಠ ೨೭, ಶಕ ವರ್ಷ ೧೯೩೨) | ಸಂಚಿಕೆ ೨೪

## ಭಾಗ-೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮಾನ್ಯ 8ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ ಬೆಂಗಳೂರುನಗರ**
**ದಿನಾಂಕ:19ನೇ ಮೇ, 2010**

**ವಿಷಯ:** ವಾರಸುದಾರರು ಇಲ್ಲದೆ ಇರುವ ವಾಹನಗಳನ್ನು ಹರಾಜು ಮಾಡಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ಕೋರಿ ಮನವಿ.

**ಉಲ್ಲೇಖ:** ಕಲಾಸಿಪಾಳ್ಯ ಪಿ.ಎಸ್. ಸಿಮೀಸ್ ನಂ.28,29,30,38/10, ಸಿಮೀಸ್ ನಂಬರ್‌ಗಳು.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖನಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ಕಲಾಸಿಪಾಳ್ಯ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ದ್ವಿಚಕ್ರ ವಾಹನಗಳು ವಾರಸುದಾರರು ಇಲ್ಲದೆ ಸಿಕ್ಕಿದ್ದು ಈ ವಾಹನಗಳ ಬಗ್ಗೆ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆ ಮೂಲಕ ಮಾಹಿತಿ ಕಳುಹಿಸಿದ್ದು ಈ ವಾಹನಗಳ ಬಗ್ಗೆ ಯಾವುದೇ ಮಾಹಿತಿ ಸಿಕ್ಕಿರುವುದಿಲ್ಲ ಹಾಗೂ ಆರ್.ಟಿ.ಓ. ಕಛೇರಿಯಲ್ಲಿ "ಬಿ" ಎಕ್ಸಾಟ್ರಾಕ್ಟನ್ನು ಪಡೆದು ವಾರಸುದಾರರ ಪತ್ತೆ ಕಾರ್ಯ ಕೈಗೊಂಡಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ವಾಹನಗಳು ತುಂಬಾ ಹಳೆಯದಾಗಿದ್ದು ಠಾಣೆಯಲ್ಲಿ ಇವುಗಳನ್ನು ನಿಲ್ಲಿಸಲು ಸ್ಥಳಾವಕಾಶ ಇರುವುದಿಲ್ಲ. ಈ ವಾಹನಗಳ ಬಗ್ಗೆ ಮುಂದೆಯೂ ಸಹ ವಾರಸುದಾರರು ಪತ್ತೆಯಾಗುವ ಸಾಧ್ಯತೆಗಳು ಇರುವುದಿಲ್ಲ. ಆದ್ದರಿಂದ ಈ ವಾಹನಗಳನ್ನು ಸಾರ್ವಜನಿಕರಿಗೆ ಬಹಿರಂಗ ಹರಾಜು ಮಾಡಲು, ಅದರಿಂದ ಬಂದ ಹಣವನ್ನು ಸರ್ಕಾರಕ್ಕೆ ಕಟ್ಟಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ನೀಡಬೇಕೆಂದು ಕೋರಿದೆ.

ವಾಹನಗಳ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ಸಿಮೀಸ್ ನಂಬರ್ | ಪಿ.ಎಫ್. ನಂಬರ್ | ವಾಹನ ಹೆಸರು | ವಾಹನದ ವಿವರಗಳು |
|---|---|---|---|---|
| 1. | 28/10 | 04/10 | ಟಿ.ವಿ.ಎಸ್. ಚಾಂಪ್ ಕೆಂಪು ಬಣ್ಣ | ಕೆಎ-09, ಆರ್-6249, ಇಂಜಿನ್ ನಂಬರ್ ಇರುವುದಿಲ್ಲ. ಚಾಸೀಸ್ ನಂ.1711ಎಫ್7781 |
| 2. | 29/10 | 05/10 | ಹೀರೋ ಹೊಂಡ ಸ್ಪ್ಲೆಂಡರ್ ಕಪ್ಪು ಮತ್ತು ನೀಲಿ ಬಣ್ಣ | ಕೆಎ-05 ಹೆಚ್-9965, ಇಂಜಿನ್ ನಂ.03ಎಲ್16 ಎಂ೬9982, ಚಾಸೀಸ್ ನಂ.03ಎಲ್1ಸಿ6ಸಿ30176 |
| 3. | 30/10 | 06/10 | ಹೊಂಡಾ ಆಕ್ಟೀವಾ ಸಿಲ್ವರ್ ಬಣ್ಣ | ಕೆಎ-03-ಇಎಫ್-9063, ಇಂಜಿನ್ ಮತ್ತು ಚಾಸೀಸ್ ನಂಬರ್ ಸರಿಯಾಗಿ ಕಾಣುವುದಿಲ್ಲ. ಟ್ಯಾಂಪರ್ ಆಗಿರುತ್ತದೆ. |

| ಕ್ರ. ಸಂ. | ಸಿಮೀಸ್ ನಂಬರ್ | ಪಿ.ಎಫ್. ನಂಬರ್ | ವಾಹನ ಹೆಸರು | ವಾಹನದ ವಿವರಗಳು |
|---|---|---|---|---|
| 4. | 38/10 | 09/10 | ಹೊಂಡಾ ಆಕ್ಟೀವಾ ಕಪ್ಪು ಬಣ್ಣ | ಕೆಎ–04–ಇಹೆಚ್–1912, ಇಂಜಿನ್ ನಂ.ಇಲ್ಲ ಚಾಸೀಸ್ ನಂ.ಎಂಇ4ಜೆಎಫ್085038183972. |

ಪೊಲೀಸ್ ಇನ್ಸ್‌ಪೆಕ್ಟರ್,
ಕಲಾಸಿಪಾಳ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ.

**ಮಾನ್ಯ 8ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ ಬೆಂಗಳೂರುನಗರ**
**ದಿನಾಂಕ:19ನೇ ಮೇ, 2010**

**ವಿಷಯ:** ವಾರಸುದಾರರು ಇಲ್ಲದೆ ಇರುವ ವಾಹನಗಳನ್ನು ಹರಾಜು ಮಾಡಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ಕೋರಿ ಮನವಿ.

**ಉಲ್ಲೇಖ:** ಕಲಾಸಿಪಾಳ್ಯ ಪೊಲೀಸ್ ಠಾಣೆಯ ಕೇಸುಗಳಲ್ಲಿ ನ್ಯಾಯಾಲಯದಲ್ಲಿ ಅಕ್ವಿಟ್ ಆಗಿರುವ ಕೇಸುಗಳು.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖನಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ಕಲಾಸಿಪಾಳ್ಯ ಪೊಲೀಸ್ ಠಾಣೆಯಲ್ಲಿ ಆರೋಪಿಗಳ ಕಡೆಯಿಂದ ಅಮಾನತ್ತು ಪಡಿಸಿಕೊಂಡಿರುವ ವಾಹನಗಳಿದ್ದು ಈ ಕೇಸುಗಳು ನ್ಯಾಯಾಲಯದಲ್ಲಿ ಖುಲಾಸೆಯಾಗಿದ್ದು, ಈ ವಾಹನಗಳ ಬಗ್ಗೆ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆ ಮೂಲಕ ಮಾಹಿತಿ ಕಳುಹಿಸಿದ್ದು ಈ ವಾಹನಗಳ ಬಗ್ಗೆ ಯಾವುದೇ ಮಾಹಿತಿ ಸಿಕ್ಕಿರುವುದಿಲ್ಲ ಹಾಗೂ ಆರ್.ಟಿ.ಓ. ಕಛೇರಿಯಲ್ಲಿ "ಬಿ" ಎಕ್ಸಾಟ್ರಕ್ಟನ್ನು ಪಡೆದು ವಾರಸುದಾರರ ಪತ್ತೆ ಕಾರ್ಯ ಕೈಗೊಂಡಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ವಾಹನಗಳು ತುಂಬಾ ಹಳೆಯದಾಗಿದ್ದು ಠಾಣೆಯಲ್ಲಿ ಇವುಗಳನ್ನು ನಿಲ್ಲಿಸಲು ಸ್ಥಳಾವಕಾಶ ಇರುವುದಿಲ್ಲ. ಈ ವಾಹನಗಳ ಬಗ್ಗೆ ಮುಂದೆಯೂ ಸಹ ವಾರಸುದಾರರು ಪತ್ತೆಯಾಗುವ ಸಾಧ್ಯತೆಗಳು ಇರುವುದಿಲ್ಲ. ಆದ್ದರಿಂದ ಈ ವಾಹನಗಳನ್ನು ಸಾರ್ವಜನಿಕರಿಗೆ ಬಹಿರಂಗ ಹರಾಜು ಮಾಡಲು, ಅದರಿಂದ ಬಂದ ಹಣವನ್ನು ಸರ್ಕಾರಕ್ಕೆ ಕಟ್ಟಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ನೀಡಬೇಕೆಂದು ಕೋರಿದೆ.

ವಾಹನಗಳ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 1. | 179/00 ಕಲಂ 379 ಐಪಿಸಿ | 88/00 09.05.2000 | ಒಂದು ಮಾರುತಿ 800 ಕಾರ್ ಬಿಳಿ ಬಣ್ಣ | ಎಲ್‌ಪಿಆರ್ |
| 2. | 79/04 ಕಲಂ 98 ಕೆ.ಪಿ. ಆಕ್ಟ್ | 174/00 29.09.2000 | ಒಂದು ಆಟೋರಿಕ್ಷಾ ನಂ.ಕೆಎ–02–ಎ–5008 ಚಾಸೀಸ್ ನಂ.24 ಎಫ್ 96 ಎಂ63390, ಇಂಜಿನ್ ನಂ.24ಎಂ96ಎಂ566885 | – |
| 3. | 150/01 ಕಲಂ 379 ಐಪಿಸಿ | 190/01 11.10.01 | ಒಂದು ಮಾರುತಿ ವ್ಯಾನ್ ನಂ.ಟಿಎ–03–434 ಚಾಸೀಸ್ ನಂ.391 ಐಎನ್ 743608, ಇಂಜಿನ್ ನಂ.ಎಫ್8ಬಿಎನ್206544 | "ಸಿ" ಅಂತಿಮ ವರದಿ |
| 4. | 151/02 ಕಲಂ 98 ಕೆ.ಪಿ.ಆಕ್ಟ್ | 43/02 23.03.02 | ಒಂದು ಟಿವಿಎಸ್ 50 ನಂ.ಕೆಎ–02–ಇ–5132 ಚಾಸೀಸ್ ನಂ.007ಪಿ376546, ಇಂಜಿನ್ ನಂ.ಎ007ಎಂ371525 | 53766/02 |
| 5. | 150/01 ಕಲಂ 379 ಐಪಿಸಿ | 95/02 02.06.02 | ಒಂದು ಮಾರುತಿ ವ್ಯಾನ್ ಟಿಎನ್–47–ಸಿ–4639, ಚಾಸೀಸ್ ನಂ.406378, ಇಂಜಿನ್ ನಂ.2035743 | "ಸಿ" ಅಂತಿಮ ವರದಿ |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 6. | 611/02 ಕಲಂ 379 ಐಪಿಸಿ | 282/02 17.12.02 | ಒಂದು ಆಟೋ ರಿಕ್ಷಾ ನಂಬರ್, ಚಾಸೀಸ್ ನಂಬರ್ ಹಾಗೂ ಇಂಜಿನ್ ನಂಬರ್ ಇರುವುದಿಲ್ಲ. | 6642/03 |
| 7. | –ಡಿಟೋ– | 283/02 17.12.02 | 1. ಒಂದು ಆಟೋರಿಕ್ಷಾ ನಂ. ಇರುವುದಿಲ್ಲ ಚಾಸೀಸ್ ನಂಬರ್ ಹಾಗೂ ಇಂಜಿನ್ ನಂಬರ್ ಇರುವುದಿಲ್ಲ. | 6642/03 |
| 8. | –ಡಿಟೋ– | 283/02 17.12.02 | 2. ಒಂದು ಆಟೋರಿಕ್ಷಾ ನಂ. ಇರುವುದಿಲ್ಲ. ಚಾಸೀಸ್ ನಂಬರ್ ಹಾಗೂ ಇಂಜಿನ್ ನಂಬರ್ ಇರುವುದಿಲ್ಲ. | 6642/03 |
| 9. | –ಡಿಟೋ– | 285/02 18.12.02 | 1. ಒಂದು ಆಟೋರಿಕ್ಷಾ ನಂಬರ್ ಎಂಹೆಚ್–032, ಕ್ಯೂ–8806, ಇಂಜಿನ್ ನಂಬರ್ 24ಹೆಚ್94ಎಂ94301, ಚಾಸೀಸ್ ನಂ.24ಜಿ94ಡಿ94483. | 6642/03 |
| 10. | 74/03 ಕಲಂ 379 ಐಪಿಸಿ | 29/03 07.02.03 | ಬಜಾಜ್ ಸ್ಕೂಟರ್ ನಂ.ಸಿಕೆಓ–3269, ಇಂಜಿನ್ ನಂ.ಡಬ್ಲ್ಯೂ06ಇ040638, ಚಾಸೀಸ್ ನಂ.060040480 | 6643/03 |
| 11. | 22/03 ಕಲಂ 379 ಐಪಿಸಿ (ಮೊ.ಸಂ.560/05 ಕಲಂ 98 ಕೆ.ಪಿ. ಆಕ್ಟ್) | 72/03 01.04.03 | 407 ಟಾಟಾ ವಾಹನ ನಂ.ಕೆಎ–01–ಎ–3985 ಚಾ. ನಂ.357011ಎಯುಕ್ಯೂ702215 ಇ.ನಂ.497ಎಸ್‌ಪಿ21ಎಯುಕ್ಯೂ7594198 | 5503/05 |
| 12. | –ಡಿಟೋ– | 73/03 01.04.03 | 407 ಟಾಟಾ ವಾಹನ ನಂ.ಕೆಎ–081559 ಚಾ.ನಂ.357011ಎಯುಕ್ಯೂ810529 ಇಂಜಿನ್ ನಂ.497ಎಸ್‌ಪಿ21ಎಯುಕ್ಯೂ9732148 | 5503/05 |
| 13. | –ಡಿಟೋ– | 75/03 01.04.03 | 407 ಟಾಟಾ ವಾಹನ ನಂಬರ್ ಕೆಎ–01–ಎ–3450 ಚಾ. ನಂ.35701 ಜಿಟಿಕ್ಯೂ82694 ಇಂಜಿನ್ ನಂ.497 ಎಸ್‌ಪಿ21ಎಸಿಕ್ಯೂ732191 | 5503/05 |
| 14. | –ಡಿಟೋ– | 81/03 10.04.03 | 407 ಟಾಟಾ ವಾಹನ ನಂ.ಕೆಎ–081817 ಚಾಸೀಸ್ ನಂ.357010 ಎಟಿಕ್ಯೂ813751 ಇಂಜಿನ್ ನಂ.4975921594387484 | 5503/05 |
| 15. | –ಡಿಟೋ– | 87/03 18.04.03 | ಟಾಟಾ ಸುಮೋ ನಂ.ಟಿಎನ್–58–ಎ–7001, ಚಾಸೀಸ್ ನಂ.385003 ಜಿಆರ್ಓ 915036 ಇಂಜಿನ್ ನಂ.254701102715 | 5503/05 |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 16. | 326/02 ಕಲಂ 379 ಐಪಿಸಿ | 116/04 13.06.04 | ಒಂದು ಸುಜುಕಿ ಫಿಯರೋ ನಂ.ಕೆಎ–03–ಇಎಫ್–3747, ಇಂಜಿನ್ ನಂ. ಐಎನ್‌ಜೆ20ಎಸ್‌ಎಂ138238, ಚಾಸೀಸ್ ನಂ.ಎಂಜೆ20ಎಸ್‌ಎಫ್136802 | "ಸಿ" ಅಂತಿಮ ವರದಿ |
| 17. | 338/04 ಕಲಂ 379 ಐಪಿಸಿ | 195/04, 03.09.04 | ಟೆಂಪೋ ಟ್ರಾವೆಲ್, ನಂ.ಕೆಎ–07–3822, ಇಂಜಿನ್ ನಂ.ಡಿಓ2009567, ಚಾಸೀಸ್ ನಂ.ಟಿ–58008658702 | "ಸಿ" ಅಂತಿಮ ವರದಿ |
| 18. | 285/05, ಕಲಂ 41(ಬಿ) ರೆ/ವಿ 102 ಸಿಆರ್‌ಪಿಸಿ | 94/05, 21.04.05 | ಒಂದು ಯಮಹಾ ಮೋಟರ್ ಸೈಕಲ್, ನಂ.ಸಿಕೆಎನ್4193, ಚಾಸೀಸ್ ನಂ.ಐವಿ087455, ಇಂಜಿನ್ ನಂ.4008745 | – |
| 19. | –ಡಿಟೋ– | 95/05 22.04.05 | ಒಂದು ಬಜಾಜ್ ಮೋಟಾರ್ ಸೈಕಲ್, ನಂ.ಕೆಎ–02–ಎ–1035, ಚಾಸೀಸ್ ನಂ.ಸಿ300ಕೆ050994, ಇಂಜಿನ್ ನಂ.630ಸಿಕೆಓ50213 | – |
| 20. | 369/05 ಕಲಂ 379 ಐಪಿಸಿ | 249/05 26.11.05 | ಒಂದು ಹೀರೋ ಹೊಂಡಾ ಸಿಬಿಜೆಡ್ ನಂ.ಕೆಎ–04–ಡಬ್ಲ್ಯು–57, ಚಾಸೀಸ್ ನಂ.01046ಸಿಓ1388, ಇಂಜಿನ್ ನಂ.99ವಿ42ಜೆಡ್ ಎಎಂಬಿ386 | "ಸಿ" ಅಂತಿಮ ವರದಿ |
| 21. | 103/06 ಕಲಂ 41(ಡಿ) ರೆ/ವಿ 102 ಸಿಆರ್‌ಪಿಸಿ | 32/06, 24.02.06 | ಸೆಂಟ್ರಾ ಕಾರ್, ನಂ.ಕೆಎ–17–ಎಂ–9160, ಚಾಸೀಸ್ ನಂ.ಎಂಎಎಲ್‌ಎಬಿಎಸ್‌ಐಹೆಚ್‌ಆರ್ 2ಎಂ262174, ಇಂಜಿನ್ ನಂ.ಜಿ4ಹೆಚ್‌ಬಿ2839454. | –– |
| 22. | –ಡಿಟೋ– | 39/06, 05.03.06 | ಹೀರೋ ಹೋಂಡಾ ಸ್ಪ್ಲೆಂಡರ್, ನಂ.ಕೆಎ–25–ಎಸ್–4362, ಇಂಜಿನ್ ನಂ.04ಎಫ್15ಎಫ್14438, ಚಾಸೀಸ್ ನಂ.04ಎಫ್16ಎಫ್14458 | –– |
| 23. | 225/06 ಕಲಂ 41(ಡಿ) ರೆ/ವಿ 102 ಸಿಆರ್‌ಪಿಸಿ | 83/06, 27.05.06 | ಒಂದು ಹೀರೋ ಹೋಂಡಾ ಎಂ/ಸಿ ನಂ.ಟಿಎನ್–29–ಎಫ್–2822, ಇಂಜಿನ್ ಮತ್ತು ಚಾಸೀಸ್ ನಂಬರ್ ಸರಿಯಾಗಿ ಕಾಣುವುದಿಲ್ಲ. | 29/07 ಟಿಆರ್, 2ನೇ ಕೋರ್ಟ್ |
| 24. | –ಡಿಟೋ– | 84/06, 27.05.06 | ಒಂದು ಹೀರೋ–ಹೊಂಡಾ, ನಂ.ಕೆಎ–05–ಇವಿ–9884, ಇಂಜಿನ್ ನಂ. ಮತ್ತು | 29/07 ಟಿಆರ್, 2ನೇ ಕೋರ್ಟ್ |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 25. | 677/05 ಕಲಂ 379 ಐಪಿಸಿ | 119/07, 30.12.07 | ಹೀರೋ ಪುಚ್ ನಂ.ಕೆಎ–05–ಇಬಿ–569, ಇಂಜಿನ್ ನಂ.710600 ಚಾರ್ಸಿ ನಂ.715352 | "ಸಿ" ಅಂತಿಮ ವರದಿ |
| 26. | 05/08 ಕಲಂ 379 ಐಪಿಸಿ | 06/08 15.01.08 | ಹೀರೋ ಹೊಂಡಾ ಪ್ಯಾಷನ್, ಕಪ್ಪು ಬಣ್ಣ, ನಂ.ಕೆಎ–03–ಇಜಿ–2235, ಚಾಸೀಸ್ ನಂ.01ಹೆಚ್21ಸಿ10156, ಇಂಜಿನ್ ನಂ.01ಹೆಚ್21ಎಂಓ7151 | 3670/08 |
| 27. | –ಡಿಟೋ– | –ಡಿಟೋ– | ಬಜಾಜ್ ಡಿಸ್ಕವರ್, ಕಪ್ಪು ಬಣ್ಣ, ನಂ.ಕೆಎ–05–ಇಆರ್–4729, ಚಾಸೀಸ್, ನಂ.2ಡಿಎಸ್‌ಡಿಎಸ್22ಎನ್‌ಸಿಇ57014, ಇಂಜಿನ್ ನಂ.ಡಿಎಸ್‌ಜಿಬಿಐಎನ್‌ಎ35195. | 3670/08 |
| 28. | –ಡಿಟೋ– | –ಡಿಟೋ– | ಬಜಾಜ್ ಬೈಕ್ ಕೆಎ–05–ಇಎನ್–6425, ಚಾಸೀಸ್ ನಂ.ಎಫ್‌ಡಿಸಿಬಿಐಎಂ1707, ಇಂಜಿನ್ ನಂ.ಎಫ್‌ಡಿಇಬಿಜೆಎಂ31893. | 3670/08 |
| 29. | –ಡಿಟೋ– | –ಡಿಟೋ– | ಬಜಾಜ್ ಕವಾಸಕಿ ಕಪ್ಪು ಬಣ್ಣದ್ದು ಕೆಎ–05–ಇಹೆಚ್–5553, ಚಾಸೀಸ್ ನಂ.0ಎಫ್‌ಎಫ್‌ಬಿಹೆಚ್‌ಕೆ88830, ಇಂಜಿನ್ ನಂ.ಡಿಎಫ್‌ಎಂಬಿಹೆಚ್‌ಕೆ56151 | 3670/08 |
| 30. | –ಡಿಟೋ– | –ಡಿಟೋ– | ಬಜಾಜ್ ಕ್ಯಾಲಿಬಾರ್, ಕಪ್ಪು ಬಣ್ಣ, ನಂ.ಕೆಎ–01–ಎಲ್–3247, ಚಾಸೀಸ್ ನಂ.ಡಿಡಿಎಫ್‌ಬಿಎಫ್‌ಎಂ68571, ಇಂಜಿನ್ ನಂ.ಡಿಡಿಎಂಬಿಎಫ್161922 | 3670/08 |
| 31. | –ಡಿಟೋ– | 07/10 16.01.08 | ಟಿವಿಎಸ್ ವಿಕ್ಟರ್, ಸಿಲ್ವರ್ ಕಲರ್, ಕೆಎ–03–ಇಕ್ಯೂ–4414, ಚಾಸೀಸ್ ನಂ.ACD625A1352CO2581, ಇಂಜಿನ್ ನಂ.OF1C51374765. | 3670/08 |
| 32. | –ಡಿಟೋ– | –ಡಿಟೋ– | ಬಜಾಜ್ ಪಲ್ಸರ್ ನಂ.ಇಲ್ಲ, ಚಾಸೀಸ್ ನಂ. MD2DHCHZZNCK96531, ಇಂಜಿನ್ ನಂ.DHGBNK33979 | 3670/08 |
| 33. | –ಡಿಟೋ– | –ಡಿಟೋ– | ಬಜಾಜ್ ಫೋರೆಕ್ಸ್, ಕೆಂಪು ಬಣ್ಣ, ಕೆಎ–04–ಎಲ್–6039, ಚಾಸೀಸ್ ನಂ.31F94KA59239, ಇಂಜಿನ್ ನಂ.31MI4I61013 | 3670/08 |
| 34. | –ಡಿಟೋ– | –ಡಿಟೋ– | ಬಜಾಜ್ ಕ್ಯಾಲಿಬರ್, ಕಪ್ಪು ಬಣ್ಣ, ಕೆಎ–02–7530, ಚಾಸೀಸ್ ನಂ.30F94A05341, ಇಂಜಿನ್ ನಂ.30M94AD4386 | 3670/08 |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 35. | –ಡಿಟೋ– | –ಡಿಟೋ– | ಕೈನೆಟಿಕ್ ಜಿಎಕ್ಸ್ ಝೂಮ್, ನೀಲಿ ಬಣ್ಣ, ನಂ.ಸಿಕೆಎಸ್–4396, ಚಾಸೀಸ್ ನಂ.084159, ಇಂಜಿನ್ ನಂ.089303NIEE | 3670/08 |
| 36. | –ಡಿಟೋ– | –ಡಿಟೋ– | ಬಜಾಜ್ ಚೇತಕ್, ಗ್ರೇ ಕಲರ್, ನಂ.ಕೆಎ–05–ಎಸ್–5487, ಚಾಸೀಸ್ ನಂ.06F96C45763, ಇಂಜಿನ್ ನಂ.35M96C20121 | 3670/08 |
| 37. | –ಡಿಟೋ– | –ಡಿಟೋ– | ಬಜಾಜ್ ಸ್ಕೂಟರ್, ಹಸಿರು ಬಣ್ಣ, ಸಿಎನ್–6621, ಚಾಸೀಸ್ ನಂ.060962052, ಇಂಜಿನ್ ನಂ.H05E178878 | 3670/08 |
| 38. | –ಡಿಟೋ– | –ಡಿಟೋ– | ಬಜಾಜ್ ಚೇತಕ್, ಗ್ರೇ ಕಲರ್, ನಂ.ಕೆಎ–05–ಕ್ಯೂ–6359, ಚಾಸೀಸ್ ನಂ.06F95003879 ಇಂಜಿನ್ ನಂ.06M95007844 | 3670/08 |
| 39. | –ಡಿಟೋ– | –ಡಿಟೋ– | ಬಜಾಜ್ ಸೂಪರ್, ಗ್ರೇ ಕಲರ್, ನಂ.ಕೆಎ–01–ಕೆ–1203, ಚಾಸೀಸ್ ನಂ.08F95C26097, ಇಂಜಿನ್ ನಂ.0895C84999 | 3670/08 |
| 40. | –ಡಿಟೋ– | –ಡಿಟೋ– | ಬಜಾಜ್ ಚೇತಕ್, ಗ್ರೇ ಕಲರ್, ನಂ.ಕೆಎ–34–ಇ–4079, ಚಾಸೀಸ್ ನಂ.F06CF123531, ಇಂಜಿನ್ ನಂ.10E124244 | 3670/08 |
| 41. | –ಡಿಟೋ– | –ಡಿಟೋ– | ಬಜಾಜ್ ಸೂಪರ್, ಗ್ರೇ ಕಲರ್, ನಂ.ಸಿಕೆಎಲ್–1943, ಚಾಸೀಸ್ ನಂ.10-0-120545, ಇಂಜಿನ್ ನಂ.10E124244 | 3670/08 |
| 42. | –ಡಿಟೋ– | 175/09 05.11.09 | ಹೀರೋ ಹೋಂಡಾ ಸ್ಪ್ಲೆಂಡರ್ ನಂ.ಕೆಎ–12–ಇ–6136, ಚಾಸೀಸ್ ನಂ.98G19C01319, ಇಂಜಿನ್ ನಂ.98E7M04483 | "ಸಿ" ಅಂತಿಮ ವರದಿ |
| 43. | –ಡಿಟೋ– | 177/09 07.11.09 | ಟಿವಿಎಸ್ ಸೂಪರ್ ಹೆವಿಡ್ಯೂಟಿ ನಂ.ಕೆಎ–03–ಇಎಕ್ಸ್–3984, ಚಾಸೀಸ್ ನಂ.MD621BD1372A79307 ಇಂಜಿನ್ ನಂ.MDIA71928720 | - |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿಕೊಂಡ ಮಾಲಿನ ವಿವರ | ಸೀಮೀಸ್ ನಂಬರ್ |
|---|---|---|---|---|
| 44. | –ಡಿಟೋ– | –ಡಿಟೋ– | ಕೈನೆಟಿಕ್ ಹೋಂಡಾ ನಂ.ಕೆಎ–03–ಕ್ಯೂ–6710, ಚಾಸೀಸ್ ನಂ.592011N1EM0 ಇಂಜಿನ್ ನಂ.059020 | - |
| 45. | –ಡಿಟೋ– | –ಡಿಟೋ– | ಕೈನೆಟಿಕ್ ಹೋಂಡಾ ನಂ.ಕೆಎ–05–ಕೆ–6772, ಚಾಸೀಸ್ ನಂ.ಇಲ್ಲ ಇಂಜಿನ್ ನಂ.410671 | - |
| 46. | –ಡಿಟೋ– | 178/09 08.11.09 | ಟಿವಿಎಸ್ ಎಕ್ಸೆಲ್ ಸೂಪರ್ ಹೆವಿಡ್ಯೂಟಿ ನಂ.ಕೆಎ–01–ಇಡಿ–4028, ಚಾಸೀಸ್ ನಂ.MD621BD1662N35747, ಇಂಜಿನ್ ನಂ.OD1N61858479 | - |
| 47. | –ಡಿಟೋ– | –ಡಿಟೋ– | ಟಿವಿಎಸ್ ಎಕ್ಸೆಲ್ ಸೂಪರ್ ಹೆವಿಡ್ಯೂಟಿ ನಂ.ಕೆಎ–01–ಡಬ್ಲ್ಯೂ–3747, ಚಾಸೀಸ್ ನಂ.MD621BDL841B38661, ಇಂಜಿನ್ ನಂ.OD1B41085863 | - |

ಪೊಲೀಸ್ ಇನ್ಸ್‌ಪೆಕ್ಟರ್,
ಕಲಾಸಿಪಾಳ್ಯ ಪೊಲೀಸ್ ಠಾಣೆ,
ಬೆಂಗಳೂರು ನಗರ.

**ಮಾನ್ಯ 8ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ ಬೆಂಗಳೂರುನಗರ**
**ದಿನಾಂಕ:19ನೇ ಮೇ, 2010**

**ವಿಷಯ:** ವಾರಸುದಾರರು ಇಲ್ಲದೆ ಇರುವ ವಾಹನಗಳನ್ನು ಹರಾಜು ಮಾಡಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ಕೋರಿ ಮನವಿ.

**ಉಲ್ಲೇಖ:** ಕಲಾಸಿಪಾಳ್ಯ ಪೊಲೀಸ್ ಠಾಣೆಯ ಕೇಸುಗಳಲ್ಲಿ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿರುವ ಕೇಸುಗಳು.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖನಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ಕಲಾಸಿಪಾಳ್ಯ ಪೊಲೀಸ್ ಠಾಣೆಯಲ್ಲಿ ಆರೋಪಿಗಳ ಕಡೆಯಿಂದ ಅಮಾನತ್ತು ಪಡಿಸಿಕೊಂಡಿರುವ ವಾಹನಗಳಿದ್ದು ಈ ಕೇಸುಗಳು ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿದ್ದು, ಈ ವಾಹನಗಳ ಬಗ್ಗೆ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆ ಮೂಲಕ ಮಾಹಿತಿ ಕಳುಹಿಸಿದ್ದು ಈ ವಾಹನಗಳ ಬಗ್ಗೆ ಯಾವುದೇ ಮಾಹಿತಿ ಸಿಕ್ಕಿರುವುದಿಲ್ಲ ಹಾಗೂ ಆರ್.ಟಿ.ಓ. ಕಛೇರಿಯಲ್ಲಿ "ಬಿ" ಎಕ್ಸ್ಟ್ರಾಕ್ಟನ್ನು ಪಡೆದು ವಾರಸುದಾರರ ಪತ್ತೆ ಕಾರ್ಯ ಕೈಗೊಂಡಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ವಾಹನಗಳು ತುಂಬಾ ಹಳೆಯದಾಗಿದ್ದು ಠಾಣೆಯಲ್ಲಿ ಇವುಗಳನ್ನು ನಿಲ್ಲಿಸಲು ಸ್ಥಳವಕಾಶ ಇರುವುದಿಲ್ಲ. ಈ ವಾಹನಗಳ ಬಗ್ಗೆ ಮುಂದೆಯೂ ಸಹ ವಾರಸುದಾರರು ಪತ್ತೆಯಾಗುವ ಸಾಧ್ಯತೆಗಳು ಇರುವುದಿಲ್ಲ. ಆದ್ದರಿಂದ ಈ ವಾಹನಗಳನ್ನು ಸಾರ್ವಜನಿಕರಿಗೆ ಬಹಿರಂಗ ಹರಾಜುಮಾಡಲು, ಅದರಿಂದ ಬಂದ ಹಣವನ್ನು ಸರ್ಕಾರಕ್ಕೆ ಕಟ್ಟಲು ಕರ್ನಾಟಕ ಸರ್ಕಾರ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಲು ಅನುಮತಿ ನೀಡಬೇಕೆಂದು ಕೋರಿದೆ.

ವಾಹನಗಳ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿದ ಮಾಲಿನ ವಿವರ | ಸಿ.ಸಿ. ನಂಬರ್ |
|---|---|---|---|---|
| 1. | 177/02 ಕಲಂ 379 ಐಪಿಸಿ | 58/02 19.04.02 | ಒಂದು ಕವಾಸಕಿ ಬಜಾಜ್ ನಂ.ಸಿಕೆಬಿ–2673 | 70742/02 |
| 2. | 111/98 ಕಲಂ 379 ಐಪಿಸಿ | 207/02 06.09.02 | ಒಂದು ಸುಜುಕಿ ಸಮುರಾಯ್ ನಂ.ಕೆಎ–01–ಕ್ಯೂ–386 ಚಾಸೀಸ್ ನಂ.7711ಟಿ913776, ಇಂಜಿನ್ ನಂ.771109960277 | 20808/02 |
| 3. | 600/02 ಕಲಂ 41(ಡಿ), 102 ಸಿಆರ್‌ಪಿಸಿ 379 ಐಪಿಸಿ | 271/02 03.12.02 | ಒಂದು ಹೀರೋ ಹೊಂಡಾ ಮೋಟಾರ್ ಸೈಕಲ್ ನಂಬರ್ ಇಲ್ಲ. ಚಾಸೀಸ್ ನಂ.96ಎಎಫ್12ಎಫ್0825, ಇಂಜಿನ್ ನಂ.96ಇ10ಇ02933. | 28400/03 |
| 4. | 424/03 ಕಲಂ 41 ಕ್ಲಾಸ್ ಡಿ ರೆ/ವಿ 102 ಸಿಆರ್.ಪಿಸಿ | 145/03 11.08.03 | ಒಂದು ಲಾರಿ ನಂ.ಇಲ್ಲ ಚಾಸೀಸ್ ನಂ.344068228771 ಇಂಜಿನ್ ನಂ.692ಡಿ03236652 | – |
| 5. | 704/05 ಕಲಂ 41(ಡಿ) ರೆ/ವಿ 102 ಸಿಆರ್‌ಪಿಸಿ | 229/05, 31.10.05 | ಒಂದು ಮಾರುತಿ–1000 ಕಾರ್ ನಂ. ಕೆಎ–04–ಎನ್–4911, ಚಾಸೀಸ್ ನಂ. ಎಂಎ3ಇಬಿ021ಎಸ್‌ಓ6107911 ಇಂಜಿನ್ ನಂ.ಎಫ್10ಎಐಎನ್144626 | – |
| 6. | 766/05 ಕಲಂ 379 ಐಪಿಸಿ | 258/05 04.12.05 | ಒಂದು ಟಿವಿಎಸ್–ಸೂಪರ್ ಎಕ್ಸಲ್ ನಂ. ಟಿಎನ್–29–ಇ–6277, ಚಾಸೀಸ್ ನಂ. ಪಿಐಓಇ758918, ಇಂಜಿನ್ ನಂ.ಪಿಐಇ1304ಎಂ746112 | 476/07 |
| 7. | –ಡಿಟೋ– | 259/05 04.12.05 | ಒಂದು ಸುಜುಕಿ ಸಮುರಾಯ್, ನಂ.ಟಿಎನ್–29–ಬಿ–1259, ಚಾಸೀಸ್ ನಂ.7606ಕೆ658069, ಇಂಜಿನ್ ನಂ.005615 | 476/07 |
| 8. | –ಡಿಟೋ– | –ಡಿಟೋ– | ಸುಜುಕಿ ಸಮುರಾಯ್ ನಂ.ಕೆಎ–04–ಇಬಿ–7288, ಚಾಸೀಸ್ ನಂ.7112ಎಫ್094403, ಇಂಜಿನ್ ನಂ.7112ಎಂ149722. | 476/07 |
| 9. | –ಡಿಟೋ– | –ಡಿಟೋ– | ಒಂದು ಸುಜುಕಿ ಮ್ಯಾಕ್ಸ್ 100, ನಂ.ಟಿಎನ್–29–ಇವೈ–7249, ಚಾಸೀಸ್ ನಂ.1406ಎಂ4690 | 476/07 |
| 10. | –ಡಿಟೋ– | 260/05, 05.12.05 | ಒಂದು ಟಿವಿಎಸ್ ಸೂಪರ್ ಎಕ್ಸ್‌ಎಲ್ ಮೋಟಾರ್ ಸೈಕಲ್ ನಂ.ಸಿಕೆಕ್ಯೂ–835, ಚಾಸೀಸ್ ನಂ.3704ಎಫ್100460 | 476/07 |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿದ ಮಾಲಿನ ವಿವರ | ಸಿ.ಸಿ. ನಂಬರ್ |
|---|---|---|---|---|
| 11. | –ಡಿಟೋ– | –ಡಿಟೋ– | ಟಿವಿಎಸ್–50 ಮೊಪೆಡ್ ನಂ.ಟಿಎನ್–29–ವೈ–6905, ಚಾಸೀಸ್ ನಂ.ಎ508ಎಫ್151499, ಇಂಜಿನ್ ನಂ.ಎಂ134993 | 476/07 |
| 12. | 64/06 ಕಲಂ 379 ಐಪಿಸಿ | 20/06, 12.02.06 | ಒಂದು ಬಜಾಜ್ ಕವಾಸಕಿ ನಂ.ಕೆಎ–02–ಹೆಚ್–1010, ಇಂಜಿನ್ ನಂಬರ್.–ಇ30ಡಿಎಲ್06486, ಚಾಸೀಸ್ ನಂ.30ಎಲ್ವಿ016689 | 27163/06 |
| 13. | –ಡಿಟೋ– | 21/06 13.02.06 | ಒಂದು ಕೈನೆಟಿಕ್ ಹೋಂಡಾ ನಂ.ಕೆಎ–01–ಜೆ–497 ಇಂಜಿನ್ ನಂ.ಎನ್ಐವಿಜೆ380860, | 27163/06 |
| 14. | –ಡಿಟೋ– | –ಡಿಟೋ– | ಒಂದು ಬಜಾಜ್ ಚೇತಕ್ ನಂ. ಸಿಆರ್ಡಬ್ಲ್ಯೂ–8349, ಇಂಜಿನ್ ನಂ.0ಬಿಇ993288 | 27163/06 |
| 15. | 626/04 ಕಲಂ 379 ಐಪಿಸಿ | 125/06 07.09.06 | ಒಂದು ಆಕ್ಟೀವ್ ಹೋಂಡಾ ನಂ.ಕೆಎ–17–ಕ್ಯೂ–972, ಚಾಸೀಸ್ ನಂ.ಎಂ54ಜೆಎಫ್ಓ85ಎ38156892, ಇಂಜಿನ್ ನಂ.ಜೆಎಫ್08ಇ0162259, ಕಪ್ಪು ಬಣ್ಣ. | 34453/06 |
| 16. | 336/06 ಕಲಂ 379 ಐಪಿಸಿ | 96/07, 05.11.07 | ಒಂದು ಬಜಾಜ್ ಚೇತಕ್, ನಂ.ಕೆಎ–01–ಎಲ್–1031, ಇಂಜಿನ್ ನಂ.35ಎಂಡಬ್ಲ್ಯೂ6ಜಿ2288, ಚಾಸೀಸ್ ನಂ.06ಇ96610260 | 1812/08 |
| 17. | –ಡಿಟೋ– | –ಡಿಟೋ– | ಒಂದು ಹೀರೋ ಹೋಂಡಾ ಸಿಡಿ–100 ನಂ.ಕೆಎ–01–ಹೆಚ್–9830 | 1812/08 |
| 18. | –ಡಿಟೋ– | –ಡಿಟೋ– | ಒಂದು ಬಜಾಜ್ ಪಲ್ಸರ್ ನಂಬರ್ ಇಲ್ಲ, ಚಾಸೀಸ್ ನಂ.ಬಿಹೆಚ್ಬಿಬಿಕೆಸಿಓ5995, ಇಂಜಿನ್ ನಂ.ಬಿಹೆಚ್ಜಿಬಿಕೆಸಿಓ5979 | 1812/08 |
| 19. | –ಡಿಟೋ– | –ಡಿಟೋ– | ಟಿವಿಎಸ್–ವಿಕ್ಟರ್ ನಂ.ಕೆಎ–04–ಇಇ–3424, ಇಂಜಿನ್ ನಂ.ಎನ್3305ಎಂ517429. ಚಾಸೀಸ್ ನಂ.ಬಿ304ವಿ493502 | 1812/08 |
| 20. | 169/08 ಕಲಂ 399–402 ಐಪಿಸಿ | 75/08 07.10.08 | ಒಂದು ಬಜಾಜ್ ಸಿಟಿ 100 ನಂ.ಕೆಎ–03–ಇಆರ್–1378 | 22083/08 |
| 21. | 69/09 ಕಲಂ 379 ಐಪಿಸಿ | 79/08 08.10.08 | ಒಂದು ಕಪ್ಪು ಬಣ್ಣದ ಪಲ್ಸರ್, ನಂ.ಕೆಎ–01–ವಿ–7740 | – |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿದ ಮಾಲಿನ ವಿವರ | ಸಿ.ಸಿ. ನಂಬರ್ |
|---|---|---|---|---|
| 22. | 206/08 ಕಲಂ 379 ಐಪಿಸಿ | 04/09 12.01.09 | ಒಂದು ಟಿ.ವಿ.ಎಸ್. ಸ್ಕೂಟಿ ನಂ.ಕೆಎ–02–ಇಆರ್–2041, ಚಾಸೀಸ್ ನಂ.ಎಂ0626ಬಿಜಿ3682504712, ಇಂಜಿನ್ ನಂ.0ಜಿ3ಇ82605408, ಪರ್ಪಲ್ ಕಲರ್ | – |
| 23. | 173/08 ಕಲಂ 457–380 ಐಪಿಸಿ | 15/09 05.02.09 | ಒಂದು ರಾಯಲ್ ಎನ್‌ಫಿಲ್ಡ್ ಕಂಪನಿಯ ಮೋಟಾರ್ ಸೈಕಲ್ ನಂ.ಕೆಎ–01–ಯು–2930, ನೀಲಿ ಬಣ್ಣ, ಚಾಸೀಸ್ ನಂ.2ಎಲ್‌ಜೆ00119ಇ, ಇಂಜಿನ್ ನಂ.2ಎಲ್‌ಜೆ00119ಇ | – |
| 24. | 33/09 ಕಲಂ 379 ಐಪಿಸಿ | 29/09 21.02.09 | ಒಂದು ಆಟೋರಿಕ್ಷಾ ನಂ.ಕೆಎ–30–1028, ಚಾಸೀಸ್ ನಂ.ಎಫ್24ಡಿಕೆ087421, ಇಂಜಿನ್ ನಂ.024ಡಿಕೆ084900, 1992 ಮಾಡೆಲ್ | ಯುಐ |
| 25. | –ಡಿಟೋ– | 30/09 21.02.09 | ನಂ.ಕೆಎ–01–4209 ಇಂಜಿನ್ ನಂ.24ಎಂ93916834, ಚಾಸೀಸ್ ನಂ.24ಎಫ್93917137, 1993 ಮಾಡೆಲ್ | ಯುಐ |
| 26. | –ಡಿಟೋ– | 30/09 21.02.09 | ನಂ.ಡಬ್ಲ್ಯೂಕೆ–4589, ಇಂಜಿನ್ ನಂ.ಡಬ್ಲ್ಯೂ24ಇ019192, ಚಾಸೀಸ್ ನಂ.ಡಬ್ಲ್ಯೂ24ಸಿ019255, 1989, ಮಾಡೆಲ್ | ಯುಐ |
| 27. | –ಡಿಟೋ– | –ಡಿಟೋ– | ನಂ.ಕೆಎ–05–5205, ಇಂಜಿನ್ ನಂ.24ಎಂ93128992, ಚಾಸೀಸ್ ನಂ.24ಎಫ್93129198, 1993 ಮಾಡೆಲ್ | ಯುಐ |
| 28. | –ಡಿಟೋ– | –ಡಿಟೋ– | ನಂ.ಕೆಎ–02–ಎ–4089, ಇಂಜಿನ್ ನಂ.24ಎಂ94378959, ಚಾಸೀಸ್ ನಂ.24ಎಫ್96ಕೆ36629, 1996 ಮಾಡೆಲ್ | ಯುಐ |
| 29. | –ಡಿಟೋ– | –ಡಿಟೋ– | ನಂ.ಕೆಎ–25–2619, ಇಂಜಿನ್ ನಂ.ಎಂ24ಡಿಎಫ್074295, ಚಾಸೀಸ್ ನಂ.ಎಫ್240ಎಫ್077539, 1992 ಮಾಡೆಲ್ | ಯುಐ |
| 30. | –ಡಿಟೋ– | 36/09 14.03.09 | ಒಂದು ಆಟೋರಿಕ್ಷಾ ನಂ.ಕೆಎ–22–789, ಚಾಸೀಸ್ ನಂ.24ಎಫ್‌ಬಿಎಫ್90364, ಇಂಜಿನ್ ನಂ.24ಎಂಬಿಬಿಎಫ್36189 | ಯುಐ |

| ಕ್ರ. ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. ಮತ್ತು ವಶಪಡಿಸಿಕೊಂಡ ದಿನಾಂಕ | ವಶಪಡಿಸಿದ ಮಾಲಿನ ವಿವರ | ಸಿ.ಸಿ. ನಂಬರ್ |
|---|---|---|---|---|
| 31. | 325/09 ಕಲಂ 41(ಡಿ)102 ಸಿಆರ್‌ಪಿಸಿ ಸಹಿತ 379ಐಪಿಸಿ | 167/09 21.10.09 | ಬಜಾಜ್ ಪಲ್ಸರ್ ನಂ.ಕೆಎ–03–ಇಎಫ್–9444, ಇಂಜಿನ್ ನಂ.ಡಿಹೆಚ್‌ಜಿಬಿಜೆಡಿ32915, ಚಾಸೀಸ್ ನಂ.ಡಿಹೆಚ್‌ವಿಬಿಜೆಡಿ32971 | ಯುಐ |
| 32. | –ಡಿಟೋ– | –ಡಿಟೋ– | ಬಜಾಜ್ ಕವಾಸಕಿ ಬಾಕ್ಸರ್ ನಂ.ಎಪಿ–03–ಕೆ–7498, ಇಂಜಿನ್ ನಂ.ಡಿಎಂಎಂಬಿಕೆಇ98644, ಚಾಸೀಸ್ ನಂ.ಡಿಎಂಎಫ್‌ಬಿಕೆಇ98525 | ಯುಐ |
| 33. | 304/09 ಕಲಂ 399–402 ಐಪಿಸಿ | 159/09 02.10.09 | ಆಟೋರಿಕ್ಷಾ ನಂ.ಕೆಎ–05–ಎಎ–2761 | 321/10 |
| 34. | 364/09 ಕಲಂ 399–402 ಐಪಿಸಿ | 194/09 06.12.09 | ಒಂದು ಸಿಲ್ವರ್ ಬಣ್ಣದ ಪಲ್ಸರ್ ನಂ.ಕೆಎ–01 ಇಎಫ್–8325 | 23/10 ಎಫ್‌ಟಿಸಿ 10 |

ಪೊಲೀಸ್ ಇನ್ಸ್‌ಪೆಕ್ಟರ್,
ಕಲಾಸಿಪಾಳ್ಯ ಪೊಲೀಸ್ ಠಾಣೆ,
ಬೆಂಗಳೂರು ನಗರ.

ಪಿಆರ್–841

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ರಾಮನಗರ ಜಿಲ್ಲೆ ಮತ್ತು ಕನಕಪುರ ತಾಲ್ಲೂಕಿನ ಹಾರೋಹಳ್ಳಿ ಗ್ರಾಮದಲ್ಲಿ ಸರ್ವೆ ನಂ.284 ರಲ್ಲಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425 ಹಾಗೂ ಹಾರೋಹಳ್ಳಿ ಮತ್ತು ಚುಳಕನಕೆರೆ ಕಾವಲು ಗ್ರಾಮದ ಸರ್ವೆ ನಂ.284 ಮತ್ತು 01 ರಲ್ಲಿ ಕಲ್ಲು ಗಣಿ ಗುತ್ತಿಗೆ 426ರಲ್ಲಿ ಮೆ॥ ಗಾಡ್ ಗ್ರಾನೈಟ್ಸ್ ರವರಿಗೆ ಕ್ರಮವಾಗಿ 9.00 ಎಕರೆಗಳಿಗೆ ದಿ:26.03.01 ರಿಂದ 20 ವರ್ಷಗಳಿಗಾಗಿ ಮಂಜೂರಾಗಿದ್ದ ಗುತ್ತಿಗೆಗಳನ್ನು ಆಧ್ಯರ್ಪಣೆ ಯನ್ನು ಅಂಗೀಕರಿಸುವ ಬಗ್ಗೆ.

**ಉಲ್ಲೇಖ:** 1) ಗುತ್ತಿಗೆದಾರರ ಮನವಿ ಪತ್ರ ದಿ:28–11–2001.
2) ಉಪ ನಿರ್ದೇಶಕರು, ರಾಮನಗರ ರವರ ಪತ್ರ ಸಂಖ್ಯೆ: ಗಭೂಇ/ ಉನಿಕ/ಕಗಗು/425/03–04/1087, ದಿನಾಂಕ: 05–01–2004.
3) ಉಪ ನಿರ್ದೇಶಕರು ರಾಮನಗರ ರವರ ಪತ್ರ ಸಂಖ್ಯೆ: ಗಭೂಇ/ಉನಿಕ/ಕಗಗು/426/ಅಳತೆ/07–08/6509 ದಿನಾಂಕ:09–08–2007

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕಿನ ಹಾರೋಹಳ್ಳಿ ಗ್ರಾಮದಲ್ಲಿ ಸರ್ವೆ ನಂ.284 ರಲ್ಲಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425 ಹಾಗೂ ಹಾರೋಹಳ್ಳಿ ಮತ್ತು ಚುಳಕನಕೆರೆ ಕಾವಲು ಗ್ರಾಮದ ಸರ್ವೆ ನಂ.284 ಮತ್ತು 01 ರಲ್ಲಿ ಕಗಗು 426 ರಲ್ಲಿ ಮೆ॥ ಗಾಡ್ ಗ್ರಾನೈಟ್ಸ್ ರವರಿಗೆ ಕ್ರಮವಾಗಿ 9.00 ಎಕರೆ ಹಾಗೂ 9.00 ಎಕರೆಗೆ ದಿ:26–03–2001 ರಿಂದ 20 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ದಿ:28–11–2001 ರಲ್ಲಿ ಗುತ್ತಿಗೆಯ ಪ್ರದೇಶದಲ್ಲಿ ಉತ್ತಮವಾದ ಗ್ರಾನೈಟ್ ಖನಿಜ ದೊರೆಯದೆ ಇರುವ ಕಾರಣ ಗುತ್ತಿಗೆಯನ್ನು ಆಧ್ಯರ್ಪಣೆಗಾಗಿ ಕೋರಿ ಮನವಿ ಸಲ್ಲಿಸಿದ್ದು ದಿ:13.12.2001 ರಂದು ಕಛೇರಿಯಲ್ಲಿ ಸ್ವೀಕೃತವಾಗಿರುತ್ತದೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಗುತ್ತಿಗೆಯನ್ನು ಅಧ್ಯರ್ಪಣೆಗಾಗಿ ಕೋರಿರುವ ದಿನಾಂಕದಿಂದ ಗುತ್ತಿಗೆ ಪ್ರದೇಶವನ್ನು ನಿಯಮ 19ರ ಉಪ ನಿಯಮ 2(1)(ಬಿ)ರಂತೆ ಗುತ್ತಿಗೆ

ಪ್ರದೇಶವನ್ನು ಪರಿಶೀಲಿಸಿ ಉಪನಿರ್ದೇಶಕರು ರಾಮನಗರ ರವರು ದಿ:9–8–2007ರ ಪತ್ರದಲ್ಲಿ ವರದಿ ಮಾಡಿರುವಂತೆ ಗುತ್ತಿಗೆ ಪ್ರದೇಶವು ಗಣಿಗಾರಿಕೆ ನಡೆಸದೇ ನಿಷ್ಕ್ರೀಯವಾಗಿರುವುದಾಗಿ ತಿಳಿಸಿರುತ್ತಾರೆ ಹಾಗೂ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425ರ ಮೇಲೆ ರೂ.59,800/– ಗಳು ಮತ್ತು ಕಲ್ಲು ಗಣಿ ಗುತ್ತಿಗೆ ಸಂಖ್ಯೆ:426ರ ಮೇಲೆ ರೂ.59,800/–ಗಳ ಬಾಕಿ ಪಾವತಿಸಬೇಕಾಗಿರುವುದಾಗಿ ವರದಿ ಮಾಡಿದ್ದು ಅದರಂತೆ ಗುತ್ತಿಗೆದಾರರೂ.ದಿ:22–2–08 ರಂದು ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425ರ ಮೇಲಿನ ಬಾಕಿ ರೂ.37,726/– ಮತ್ತು ಕಲ್ಲು ಗಣಿ ಗುತ್ತಿಗೆ ಸಂಖ್ಯೆ:426ರ ಮೇಲಿನ ಬಾಕಿ ರೂ.37,726/–ಗಳನ್ನು ಪಾವತಿಸಿ ಪಾವತಿ ದಿನಾಂಕದವರೆಗಿನ ಬಡ್ಡಿ ಬಾಕಿಗೆ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಪಾವತಿಸಲಾದ 1/2 ವಾರ್ಷಿಕ ಸ್ಥಿರ ತೆರಿಗೆ ಮುಂಗಡವಾದ ರೂ.67,500/–ರಂತೆ ಪ್ರತಿ ಗುತ್ತಿಗೆ ಮೇಲಿನ ಪಾವತಿಯನ್ನು ಹೊಂದಾಣಿಕೆ ಮಾಡಿಕೊಳ್ಳಲು ಕೋರಿರುವುದರಿಂದ ಪಾವತಿಯನ್ನು ಬಡ್ಡಿ ಬಾಕಿಗೆ ಹೊಂದಾಣಿಕೆ ಮಾಡಿಕೊಂಡಲ್ಲಿ ಗುತ್ತಿಗೆ ಮೇಲಿನ ಬಾಕಿ ಪೂರ್ಣವಾಗಿ ಪಾವತಿಯಾಗಿರುತ್ತದೆ ಹಾಗೂ 203ರ ಮೇಲಿನ ಬಾಕಿ ಪಾವತಿಗೆ ನ್ಯಾಯಾಲಯದ ಆದೇಶಕ್ಕೆ ಬದ್ಧರಾಗಿರುವುದಾಗಿ ಮುಚ್ಚಳಿಕೆ ಪತ್ರ ನೀಡಿರುವುದರಿಂದ ಮುಂದೆ ಉದ್ಭವವಾಗಬಹುದಾದ ಬಾಕಿಗೆ ಕೂಡಲೇ ಪಾವತಿಸುವ ಷರತ್ತಿಗೊಳಪಡಿಸುತ್ತಾ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425 ಹಾಗೂ 426ರ ಗುತ್ತಿಗೆಗಳನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮದ 1994ರ ನಿಯಮ 19ರ ಉಪ ನಿಯಮ 2(1)(ಬಿ) ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಎಂ.ಆರ್.ಸಿ.92 ದಿ:2–07–1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಮೇಲಿನ ಗುತ್ತಿಗೆಗಳನ್ನು ಗುತ್ತಿಗೆದಾರರ ಮನವಿಯಂತೆ ಆಧ್ಯರ್ಪಣೆಯನ್ನು ದಿ:13.12.2001 ರಿಂದ ಅಂಗೀಕರಿಸಲು ಈ ಕೆಳಗಿನಂತೆ ಆದೇಶವನ್ನು ಮಾಡಲಾಗಿದೆ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು 425,426/2010–11 ದಿನಾಂಕ:4ನೇ ಮೇ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 19ನೇ ಉಪ ನಿಯಮ 2(1)(ಬಿ)ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ಹಾರೋಹಳ್ಳಿ ಗ್ರಾಮದಲ್ಲಿ ಸರ್ವೆ ನಂ.284 ರಲ್ಲಿ ವಿಸ್ತೀರ್ಣ 9.00 ಎಕರೆಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425 ಮಂಜೂರಾದ ದಿನಾಂಕ:26–03–2001 ರಿಂದ 20 ವರ್ಷಗಳಿಗಾಗಿ ಹಾಗೂ ಕನಕಪುರ ತಾಲ್ಲೂಕು ಹಾರೋಹಳ್ಳಿ ಮತ್ತು ಚುಳಕನಕೆರೆ ಕಾವಲು ಗ್ರಾಮದ ಸರ್ವೆ ನಂ.248 ಮತ್ತು 01 ರಲ್ಲಿ ವಿಸ್ತೀರ್ಣ 9.00 ಎಕರೆಗೆ ಕಲ್ಲು ಗುತ್ತಿಗೆ ಸಂಖ್ಯೆ:426 ಮಂಜೂರಾದ ದಿ:26–03–2001 ರಿಂದ 20 ವರ್ಷಗಳಿಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆಯನ್ನು ಉಪ ನಿರ್ದೇಶಕರು ಕನಕಪುರ ರವರ ಪತ್ರದ ದಿನಾಂಕ:5–1–2004 ರಂತೆ ಗುತ್ತಿಗೆ ಮೇಲಿನ ಬಾಕಿಯನ್ನು ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಪಾವತಿಸಲಾದ ಮುಂಗಡ ಸ್ಥಿರ ತೆರಿಗೆಯನ್ನು ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳುವ ಮೂಲಕ ಗುತ್ತಿಗೆ ಆಧ್ಯರ್ಪಣೆ ಕೋರಿರುವ ದಿನಾಂಕದವರೆಗಿನ ಬಾಕಿ ಪೂರ್ಣವಾಗಿ ಪಾವತಿಯಾಗಿರುವುದರಿಂದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:425 ಮತ್ತು ಕಲ್ಲು ಗಣಿ ಗುತ್ತಿಗೆ ಸಂಖ್ಯೆ:426ರ ಗುತ್ತಿಗೆಗಳ ಆಧ್ಯರ್ಪಣೆಯನ್ನು ದಿ:13.12.2001 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಪಿಆರ್–747 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:483 ಎಎಂಎಲ್2009: 10–11/ 972, ದಿನಾಂಕ:13ನೇ ಮೇ, 2010**

**ವಿಷಯ:** ಶ್ರೀ ಅಮಿತ್ ಕುಮಾರ್ ರವರು ದಿನಾಂಕ: 23.06.2009 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದಲ್ಲಿ 19.00 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ನವೀಕರಣ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:483 AML 09/797–10–11 ದಿನಾಂಕ:19–04–2010.

2. ಅರ್ಜಿದಾರರ ವಿವರಣೆ ದಿ:10–05–2010.

**ಪ್ರಸ್ತಾವನೆ:**

ಶ್ರೀ ಅಮಿತ್ ಕುಮಾರ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದಲ್ಲಿ 19.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 483ಎಎಂಎಲ್ 2009ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಶ್ರೀ ವೆಂಕಟಸ್ವಾಮಿ ನಾಯ್ಡು ರವರಿಗೆ ದಿನಾಂಕ: 28.01.1956ರಂದು 20 ವರ್ಷಗಳ ಅವಧಿಗೆ ಮಂಜೂರಾಗಿದ್ದು, ದಿನಾಂಕ:27.01.1976ಕ್ಕೆ ಅಂತ್ಯಗೊಂಡಿದ್ದು, ನಿಯಮ 24ಎ(1)ರ ಪ್ರಕಾರ ನವೀಕರಣ ಅರ್ಜಿಯನ್ನು ದಿ:27.01.1975ಕ್ಕಿಂತ ಮುಂಚೆ ಸಲ್ಲಿಸಬೇಕಾಗಿತ್ತು. ಆದರೆ, ಸುಮಾರು 35 ವರ್ಷಗಳ ನಂತರ ಅವರ ಮೊಮ್ಮಗನೆಂದು ಹೇಳಿಕೊಂಡಿರುವ ಶ್ರೀ ಅಮಿತ್ ಕುಮಾರ್ ರವರು ಅರ್ಜಿ ಸಲ್ಲಿಸಿರುತ್ತಾರೆ. ತತ್ಸಂಬಂಧ ಉಲ್ಲೇಖ(1)ರ ಈ ಕಛೇರಿ ಪತ್ರದಲ್ಲಿ ನವೀಕರಣ ಅರ್ಜಿಯನ್ನು ಏಕೆ ತಿರಸ್ಕರಿಸಬಾರದು ಎಂಬುದಕ್ಕೆ, ಉಲ್ಲೇಖ(2)ರಲ್ಲಿ ಅರ್ಜಿದಾರರು ಗಣಿ ಗುತ್ತಿಗೆ ಅವಧಿ ಮುಗಿದ ನಂತರ ಸಲ್ಲಿಸಿದ ನವೀಕರಣ ಅರ್ಜಿಗಳನ್ನು ಸರ್ಕಾರವು ಪರಿಗಣಿಸಿರುವ 06 ಪ್ರಕರಣಗಳನ್ನು ಉಲ್ಲೇಖಿಸಿ, ತಮ್ಮ ಮನವಿಯನ್ನು ಸಹ ಸಹಾನುಭೂತಿಯಿಂದ ಪರಿಗಣಿಸಬೇಕೆಂದೂ, ಇದರಲ್ಲಿ ತಾರತಮ್ಯ ತೋರಬಾರದೆಂದೂ, ನವೀಕರಣ ಅರ್ಜಿಯನ್ನು ವಿಳಂಬವಾಗಿ ಸಲ್ಲಿಸಿರುವ ಏಕೈಕ ಕಾರಣಕ್ಕಾಗಿ ರದ್ದುಪಡಿಸಬಾರದೆಂದು ಮಾನ್ಯ ನ್ಯಾಯಾಲಯಗಳಲ್ಲಿ ಆದ ತೀರ್ಮಾನಗಳಿವೆಯೆಂದು ತಿಳಿಸಿರುತ್ತಾರೆ. ಆದರೆ, MCR 1960ರ ನಿಯಮ 24ಎ(10)ರ ಪ್ರಕಾರ ಅವಧಿ ಮುಗಿದ ನಂತರ ಸಲ್ಲಿಸಿದ ನವೀಕರಣ ಅರ್ಜಿಯನ್ನು ಪರಿಗಣಿಸಲು ಮತ್ತು ವಿಳಂಬ ವಿನಾಯ್ತಿ ನೀಡಲು ನಿಯಮದಲ್ಲಿ ಅವಕಾಶವಿಲ್ಲದ ಕಾರಣ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 483 ಎಎಂಎಲ್ 2009ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿಆರ್–838 ನಿರ್ದೇಶಕರು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/222/ಡಿಟಿಸಿಆರ್/2007–08, ದಿನಾಂಕ:25ನೇ ಮಾರ್ಚ್, 2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಎದುರುದಾರರು** |
|---|---|
| ಅಬಕಾರಿ ಉಪ ನಿರೀಕ್ಷಕರು(1)<br>ಮಂಗಳೂರು ಉತ್ತರ ಜ್ಯಾರಿ ಮತ್ತು ತನಿಖೆ<br>ಪಣಂಬೂರು | ಜೋನ್ ಬಾಪ್ಟಿಸ್ಟ್ ಡಿಸೋಜ,<br>ಬಿನ್:ಮಾರ್ಷಲ್ ಡಿಸೋಜ,<br>ಜೆ.ಸಿ ವಿಲ್ಲಾ, ಮನೆ ನಂ:11–112–1<br>ವಾರ್ಡ್ ಸಂ:3,ಪದವು,ಕುಲಶೇಖರ,<br>ಮಂಗಳೂರು (ವಾಹನದ ಮಾಲೀಕರು)<br>ಮತ್ತು ಇತರೆ ಒರ್ವ ಅರೋಪಿ. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಜಂಟಿ ಆಯುಕ್ತರು, ಮಂಗಳೂರು ವಿಭಾಗದವರ ನಿರ್ದೇಶನದ ಮೇರೆಗೆ ರಚಿಸಲಾದ ವಿಶೇಷ ತಂಡದ ಅಬಕಾರಿ ಉಪ ನಿರೀಕ್ಷಕರು(1), ಉತ್ತರ ಜಾರಿ ಮತ್ತು ತನಿಖೆ, ಮಂಗಳೂರು ಇವರು ದಿ: 16.12.2007 ರಂದು ಬೆಳಿಗ್ಗೆ 11.45 ಗಂಟೆ ಸಮಯದಲ್ಲಿ ಮಂಗಳೂರು ನಗರದಲ್ಲಿ ಗಸ್ತು ತಿರುಗುತ್ತಿರುವ ಸಂದರ್ಭದಲ್ಲಿ ಮಂಗಳೂರು ನಗರದ ಅತ್ತಾವರ ರೈಲ್ವೆ ಸ್ಟೇಷನ್‌ನಿಂದ ಕದ್ರಿ ಮಲ್ಲಿಕಟ್ಟೆ ಮಾರ್ಗವಾಗಿ ಸುರತ್ಕಲ್ ಕಡೆಗೆ ಅಕ್ರಮವಾಗಿ ಬಿಳಿ ಬಣ್ಣದ ಮಾರುತಿ ಒಮಿನಿ ವ್ಯಾನಿನಲ್ಲಿ ಮದ್ಯ ಸಾಗಾಟ ಆಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಕದ್ರಿ–ಮಲ್ಲಿಕಟ್ಟೆ ಬಳಿ ರಸ್ತೆಗಾವಲು ನಡೆಸುತ್ತಿದ್ದಾಗ ಕೆಎ–20–0022 ನೊಂದಣಿ ಸಂಖ್ಯೆ ಇರುವ ಮಾರುತಿ ಒಮಿನಿ ಕಾರು ವೇಗವಾಗಿ ಬರುತ್ತಿರುವುದನ್ನು ಗಮನಿಸಿ ಅನುಮಾನಗೊಂಡು ವಾಹನವನ್ನು ನಿಲ್ಲಿಸಲು ಸೂಚಿಸಿದಾಗ, ಚಾಲಕನು ವಾಹನವನ್ನು 20 ಮೀಟರು ದೂರದಲ್ಲಿ ನಿಲ್ಲಿಸಿದನು. ಸದ್ರಿ ವಾಹನವನ್ನು ಶೋಧನೆ ಮಾಡುವರೇ ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟನ್ನು ಪಡೆಯಲು ಕಾಲವಕಾಶವಿಲ್ಲದ ಕಾರಣ ಅಬಕಾರಿ ಕಾಯಿದೆ ಕಲಂ 54ರ ಅಡಿಯಲ್ಲಿ ಸರ್ಚ್ ಮೆಮೋ ತಯಾರಿಸಿ ವಾಹನವನ್ನು

ಪರಿಶೀಲನೆ ಮಾಡಿದಾಗ 2 ಬಿಳಿ ಬಣ್ಣದ ಗೋಣಿ ಚೀಲದಲ್ಲಿ 750 ಎಂಎಲ್‌ನ ತಲಾ 60 ಬಾಟಲಿಗಳಂತೆ ನದನ್ ಮಾಲ್ಟ್ ವಿಸ್ಕಿ ಲೇಬಲ್ ಹೊಂದಿರುವ ಒಟ್ಟು 120 ಪ್ಲಾಸ್ಟಿಕ್ ಸೀಸೆಗಳನ್ನು ಅಕ್ರಮವಾಗಿ ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ1965ರ ಕಲಂ 11 ಮತ್ತು14ರ ಪ್ರಕಾರ ಅಪರಾಧವಾಗಿದ್ದು, ಕಲಂ 32,34 ಮತ್ತು 38ಎಪ್ರಕಾರ ಶಿಕ್ಷಾರ್ಹವಾಗಿರುವುದರಿಂದ,ಆರೋಪಿಗಳಾದ ಶ್ರೀ ಜೋನ್ ಬ್ಯಾಪ್ಟಿಸ್ಟ್ ಡಿಸೋಜ, ಬಿನ್ ಮಾರ್ಷಲ್ ಡಿಸೋಜ, ಜೆ.ಸಿ.ವಿಲ್ಲ,ಮನೆ ಸಂ:11–11–2–1, ವಾರ್ಡ್ ಸಂ: 3, ಪದವು, ಮಂಗಳೂರು ತಾಲೂಕು (ಕಾರಿನ ಚಾಲಕ) 2) ಶ್ರೀ.ಅಶೋಕ, ಬಿನ್ : ಜಿ.ಎಸ್. ಮೊಟಯ್ಯ, ಹರಿಕೃಪ ನಿವಾಸ ,ಮಹಾಕಾಳಿಪಡ್ಪು,ಜೆಪ್ಪು,ಮಂಗಳೂರು ಇವರುಗಳನ್ನು ದಸ್ತಗಿರಿ ಮಾಡಿ, ಸದ್ರಿ ವಾಹನ ಹಾಗೂ ಸೊತ್ತುಗಳನ್ನು ಜಫ್ತು ಪಡಿಸಿಕೊಂಡು, ಪ್ರ.ವ.ವರದಿ ಸಂಖ್ಯೆ 18/2007–08, ದಿನಾಂಕ 16–12–2007ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರ.ವ.ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ನಕಲನ್ನು ಸೊತ್ತು ಪಟ್ಟಿಯೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ವಾಹನವನ್ನು ತನಿಖೆ ಮುಗಿಯುವವರೆಗೆ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಅನುಮತಿಯನ್ನು ಕೋರಿರುತ್ತಾರೆ. ಅದರಂತೆ ಅನುಮತಿಯನ್ನು ನೀಡಲಾಗಿರುತ್ತದೆ.

**ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು:**

1) ಬಿಳಿ ಬಣ್ಣದ ಒಮಿನಿ ಮಾರುತಿ ಕಾರು ನೊಂದಣಿ ಸಂ:KA-20-0022 (Chasis No:907279, Engine No:740248)

2) ಎರಡು ಬಿಳಿ ಬಣ್ಣದ ಪ್ಲಾಸ್ಟಿಕ್ ಗೋಣಿ ಚೀಲಗಳಲ್ಲಿ 750 ಎಂಎಲ್‌ನ ತಲಾ 60ರಂತೆ ಒಟ್ಟು 120 ನದನ್ ಮಾಲ್ಟ್ ವಿಸ್ಕಿ ಯ ಬಾಟಲಿಗಳಲ್ಲಿ 90.000 ಲೀಟರು ಮದ್ಯ.

(ಮೇಲಿನ ಪ್ರತಿ ಗೋಣಿಚೀಲದಿಂದ ತಲಾ 4ರಂತೆ ಒಟ್ಟು 8 ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ.)

ವಾಹನದ ನೊಂದಾಣಿ ಮಾಲಿಕರಾದ ಶ್ರೀ ಜೋನ್ ಬಾಪ್ಟಿಸ್ಟ್ ಡಿಸೋಜ, ಬಿನ್ ಮಾರ್ಸಲ್ ಡಿಸೋಜ, ಜೆ.ಸಿ.ವಿಲ್ಲ, ಮನೆ ಸಂ:11–11–2–1, ವಾರ್ಡ್ ಸಂ:3, ಪದವು, ಮಂಗಳೂರು ತಾಲೂಕು ಇವರು ಈ ಪ್ರಾಧಿಕಾರಕ್ಕೆ ದಿ:27–12–2007 ರಂದು ವಾಹನದ ಆರ್.ಸಿ ಮಸ್ತಕದ ಪ್ರತಿ ಯೊಂದಿಗೆ ತಮ್ಮ ವಕೀಲರ ಮೂಲಕ ಅರ್ಜಿ ಸಲ್ಲಿಸಿ, ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಸದ್ರಿಯವರ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರ ಪ್ರಾಧಿಕಾರದಿಂದ ದಿ:16–1–2008ರಂದು ಹೊರಡಿಸಿದ ಆದೇಶದಲ್ಲಿ ವಾಹನದ ಮೌಲ್ಯಕ್ಕೆ ಸಮಾನವಾದ ರೂ.28,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸುವ ಹಾಗೂ ಇತರೆ ಷರತ್ತುಗಳ ಆಧಾರದ ಮೇಲೆ ವಾಹನವನ್ನು ನೊಂದಾಣಿ ಮಾಲೀಕರ ಮಧ್ಯಂತರ ಸುಪರ್ಧಿಗೆ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ. ಸದ್ರಿ ಅದೇಶದಂತೆ ವಾಹನದ ಮಾಲೀಕರು ರೂ.28,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿ ಪತ್ರ ಸಂ:–ಇಲ್ಲ–, ದಿ:23–1–2008ರಂದು ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ,ಪದವು–ಮರೋಳಿ, ಮಂಗಳೂರು ಇಲ್ಲಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ಬ್ಯಾಂಕ್ ಗ್ಯಾರೆಂಟಿಯ ಮಾನ್ಯತೆ ಅವಧಿಯು ದಿ:22–1–2010ರ ತನಕ ಊರ್ಜಿತದಲ್ಲಿದ್ದು, ತದನಂತರದಲ್ಲಿ ಮಾನ್ಯ ಅಬಕಾರಿ ಆಯುಕ್ತರ ಕೈಪಿಡಿ ಆದೇಶದಂತೆ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿ ಅಡಕವಾಗಿರುವ ಮೊತ್ತವನ್ನು ಸರ್ಕಾರದ ಕಂದಾಯ ಠೇವಣಿ ಶೀರ್ಷಿಕೆ ಸಂ:8443 00 101 001ರಲ್ಲಿ ಠೇವಣಿ ಇಡಲಾಗಿರುತ್ತದೆ. ಮಧ್ಯಂತರ ಬಿಡುಗಡೆ ಆದೇಶದಂತೆ ವಾಹನವನ್ನು ವಾಹನದ ಮಾಲೀಕರಾದ ಶ್ರೀ.ಜೋನ್ ಬಾಪ್ಟಿಸ್ಟ್ ಡಿಸೋಜ, ಇವರ ಮಧ್ಯಂತರ ಸುಪರ್ದಿಗೆ ದಿನಾಂಕ:13–2–2008ರಂದು ಬಿಡುಗಡೆ ಮಾಡಲಾಗಿರುತ್ತದೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–1 ಇವರು ದಿ:23–2–2008ರಂದು ಸಲ್ಲಿಸಿದ್ದ ತನಿಖಾ ವರದಿ ಸಂ: ಮಂ.ಉ.ಜಾ.ತ/ಸಿಆರ್‌ಎಂ/33/07–08 ಇದರೊಂದಿಗೆ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳ ವಿಶ್ಲೇಷಣಾ ವರದಿ ಸಂ:473/2008 ದಿ:4–2–2008ನ್ನು ಪ್ರಾಧಿಕಾರಕ್ಕೆ ಸಲ್ಲಿಸಿ, ಪ್ರಕರಣ ದಲ್ಲಿ ಜಪ್ತುಪಡಿಸಿಕೊಂಡ 120 ಬಾಟಲಿಗಳಲಿದ್ದ 90 ಲೀಟರು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ. ತನಿಖಾಧಿಕಾರಿಗಳು ಸಲ್ಲಿಸಿದ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳಲ್ಲಿ ಮದ್ಯಸಾರದ ಅಂಶ 24.9 ಡಿಗ್ರಿ ರಿಂದ 25.6 ಡಿಗ್ರಿ ಯು.ಪಿ ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಗಳ ಶಿಪಾರಸ್ಸಿನಂತೆ ಜಪ್ತುಪಡಿಸಿಕೊಳ್ಳಲಾಗಿರುವ ಮದ್ಯವನ್ನು ಪ್ರಾಧಿಕಾರದ ದಿ:18–3–2008ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಿಯಮಾನುಸಾರ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ನಾಶಪಡಿಸಲು ಆದೇಶಿಸಲಾಗಿದ್ದು, ಸದ್ರಿ ಆದೇಶದಂತೆ ಮದ್ಯವನ್ನು ದಿ:9–7–2008ರಂದು ನಾಶಪಡಿಸಲಾಗಿರುತ್ತದೆ.

ವಾಹನದ ಮಾಲೀಕರು ವಾಹನ ಮಧ್ಯಂತರ ಬಿಡುಗಡೆ ಬಗ್ಗೆ ಸಲ್ಲಿಸಿದ್ದ ಅರ್ಜಿಯ ಜೊತೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ದ.ಕ ಜಿಲ್ಲೆ ಮಂಗಳೂರು ಇವರಿಂದ ಪಡೆಯಲಾದ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು,ಸದ್ರಿ ವರದಿಯ ಪ್ರಕಾರ ಶ್ರೀ ಜೋನ್ ಬಾಪ್ಟಿಸ್ಟ್ ಡಿಸೋಜ, ಬಿನ್:ಮಾರ್ಸಲ್ ಡಿಸೋಜ, ಜೆ.ಸಿ.ವಿಲ್ಲ, ಮನೆ ಸಂ:11–11–2–1, ವಾರ್ಡ್ ಸಂ:3, ಪದವು, ಮಂಗಳೂರು ತಾಲೂಕು ಇವರು ಸದ್ರಿ ವಾಹನದ ನೊಂದಾಣಿ ಮಾಲೀಕರಾಗಿರುವುದು ದೃಡಪಟ್ಟಿರುವುದರಿಂದ, ಸದ್ರಿ ವಾಹನದ ಮಾಲೀಕರಿಗೆ ಹಾಗೂ ಪ್ರಕರಣದ ಆರೋಪಿತ ವ್ಯಕ್ತಿಗೆ ಜಪ್ತುಪಡಿಸಿದ ವಾಹನ ಮತ್ತು ಸೊತ್ತುಗಳನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43 ಬಿ ರಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ದಿ:17–10–2008ರಂದು ನೀಡಲಾಗಿದ್ದು, ಸದ್ರಿ ನೋಟೀಸು ಸಂಬಂಧಪಟ್ಟವರಿಗೆ ಜ್ಯಾರಿಯಾಗಿ, ವಾಹನದ ಮಾಲೀಕರು ದಿ:3–11–2008ರಂದು ಕಾರಣ ಕೇಳಿ ನೋಟೀಸಿಗೆ ಉತ್ತರಿಸುತ್ತಾ, ಪ್ರಕರಣದಲ್ಲಿ ಹೊರಿಸಲಾದ ಆರೋಪವು ಸುಳ್ಳಾಗಿದ್ದು, ತನ್ನ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ವಿನಂತಿಸಿರುತ್ತಾರೆ. ಹಾಗೂ ಆರೋಪಿಯು ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ ಜಪ್ತುಪಡಿಸಿಕೊಳ್ಳಲಾದ ಸೊತ್ತುಗಳು ತನಗೆ ಸಂಬಂಧಿಸಿದಲ್ಲವೆಂದು ತಿಳಿಸಿ ಪ್ರಕರಣದಲ್ಲಿ ಸುಳ್ಳು ಅರೋಪವನ್ನು ಹೊರಿಸಿ ಮೊಕದ್ದಮೆ ದಾಖಲಿಸಿರುವುದಾಗಿ, ಪ್ರಕರಣಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ ಪ್ರಕರಣದಿಂದ ಮುಕ್ತಗೊಳಿಸಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ವಿನಂತಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣದ ಫಿರ್ಯಾದುದಾರರಾದ ಶ್ರೀ.ವಿನೋದ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I ಪಿಡಬ್ಲ್ಯೂ–1 ಮತ್ತು ರಕ್ಷಣಾ ಸಾಕ್ಷಿ ಶ್ರೀ.ಜಾನ್ ಬ್ಯಾಪ್ಟಿಸ್ಟ್ ಡಿಸೋಜ, ಜೆ.ಸಿ ವಿಲ್ಲಾ, ಕಾರ್ಮಿಕ ಕಾಲನಿ, ಶಕ್ತಿನಗರ,ಮಂಗಳೂರು ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ. ಪ್ರಕರಣದಲ್ಲಿ ಅಭಿಯೋಗದ ಪರ ಹೆಚ್ಚಿನ ಸಾಕ್ಷಿಗಳ ವಿಚಾರಣೆಯ ಅವಶ್ಯಕತೆ ಇಲ್ಲವೆಂದು ಪ್ರಾಧಿಕಾರವು ಮನಗಂಡು ಅಭಿಯೋಗದ ಪರ ಹಾಗೂ ರಕ್ಷಣಾ ಸಾಕ್ಷಿಯ ವಿಚಾರಣೆಯನ್ನು ಮುಕ್ತಾಯಗೊಳಿಸಿ ರಕ್ಷಣಾ ಪರ ವಕೀಲರ ವಾದ ವಿವಾದಗಳನ್ನು ಆಲಿಸಿ, ಸಾಕ್ಷಿಗಳು ನೀಡಿರುವ ಹೇಳಿಕೆಗಳನ್ನು ಪರಿಶೀಲಿಸಿ, ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾಧಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ:16–12–2007ರಂದು ಮಾರುತಿ ಒಮಿನಿ ವ್ಯಾನ್ ನೊಂದಣಿ ಸಂ:KA-20-0022 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

3) ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:**

ಶ್ರೀ. ವಿನೋದ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉತ್ತರ ವಲಯ–1 ಇವರು ದಿನಾಂಕ:9–9–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ.

ನಾನು ಕಳೆದ 4 ವರ್ಷಗಳಿಂದ ಅಬಕಾರಿ ಉಪ ನಿರೀಕ್ಷಕನಾಗಿ ಮಂಗಳೂರು ಉತ್ತರ ವಲಯ–1 ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:16–12–2007ರಂದು ಬೆಳಿಗ್ಗಿನ ಸಮಯ ಗಸ್ತು ತಿರುಗುತ್ತಿರುವಾಗ ಮಂಗಳೂರು ನಗರದ ಅತ್ತಾವರ ರೈಲ್ವೆ ಸ್ಟೇಷನ್‌ನಿಂದ ಕದ್ರಿ–ಮಲ್ಲಿಕಟ್ಟೆ ಮಾರ್ಗವಾಗಿ ಸುರತ್ಕಲ್ ಕಡೆಗೆ ಅಕ್ರಮವಾಗಿ ಒಂದು ಬಿಳಿ ಬಣ್ಣದ ಮಾರುತಿ ವ್ಯಾನಿನಲ್ಲಿ ಮದ್ಯವನ್ನು ಸಾಗಾಟ ಮಾಡಲಾಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಕದ್ರಿ– ಮಲ್ಲಿಕಟ್ಟೆ ಕಡೆ ಮಾಹಿತಿಯಂತೆ ಹೊಂಚು ಹಾಕುತ್ತಿದ್ದಾಗ ಒಂದು ಬಿಳಿ ಬಣ್ಣದ ಮಾರುತಿ ವ್ಯಾನ್ ಬರುವುದನ್ನು ಕಂಡು ನಾವು ಹಾಗೂ

ಸಿಬ್ಬಂಧಿಗಳು ಅದನ್ನು ತಡೆದು ನಿಲ್ಲಿಸಲು ಸೂಚನೆ ಕೊಟ್ಟಾಗ ಚಾಲಕನು ವಾಹನವನ್ನು 20 ಮೀಟರು ದೂರದಲ್ಲಿ ನಿಲ್ಲಿಸಿದಾಗ, ಸಿಬ್ಬಂಧಿ ಸಮೇತ ಅದನ್ನು ಸುತ್ತುವರಿದು ಪರಿಶೀಲಿಸಲಾಗಿ ವಾಹನದಲ್ಲಿ ಚಾಲಕನ ಜೊತೆಯಲ್ಲಿ ಇನ್ನೊಬ್ಬ ವ್ಯಕ್ತಿಯು ಇರುವುದನ್ನು ಕಂಡು ಸದ್ರಿ 2 ವ್ಯಕ್ತಿಗಳಲ್ಲಿ ವಾಹನದ ಒಳಗೆ ಏನಿದೆ ಎಂದು ಕೇಳಿದಾಗ ಉತ್ತರ ಹೇಳಲು ತಡವರಿಸಿದರು. ಸದ್ರಿ ಸ್ಥಳದಲ್ಲಿ ವಾಹನವನ್ನು ಸರ್ಚ್ ಮಾಡಲು ಪಂಚರಾಗಿ ಸಹಕರಿಸಲು ಕೆಲವರನ್ನು ಕೇಳಿಕೊಂಡಾಗ ಓರ್ವ ವ್ಯಕ್ತಿ ಸಹಕರಿಸಲು ಒಪ್ಪಿದ ಮೇರೆಗೆ, ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟನ್ನು ಪಡೆಯಲು ಕಾಲವಾಕಾಶ ಇಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೊ ತಯಾರಿಸಿ ಪಂಚರ ಸಮಕ್ಷಮ ವಾಹನವನ್ನು ಶೋಧಿಸಿದಾಗ ವಾಹನದ ಒಳಗಡೆ 2 ಬಿಳಿ ಬಣ್ಣದ ಪ್ಲಾಸ್ಟಿಕ್ ಗೋಣಿ ಚೀಲಗಳಿದ್ದು ಅದರಲ್ಲಿ 750 ಎಂಎಲ್‌ನ ತಲಾ 60 ಬಾಟಲಿಗಳಂತೆ, 2ಗೋಣಿ ಚೀಲದಲ್ಲಿ ಒಟ್ಟು 120 ಬಾಟಲಿಗಳಿದ್ದು, ಅದರ ಹೆಸರು ನಾದನ್ ವಿಸ್ಕಿ ಎಂದು ನಮೂದಿಸಿರುತ್ತಾರೆ. ಅದು ಗೋವಾ ನಿರ್ಮಿತ ಮದ್ಯವಾಗಿದ್ದು, ಈ ಬಗ್ಗೆ ಆತನಲ್ಲಿ ಈ ಮದ್ಯದ ಬಗ್ಗೆ ಯಾವುದೇ ದಾಖಲಾತಿ ಇದೆಯೇ ಎಂದು ವಿಚಾರಿಸಿದಾಗ ಯಾವುದೂ ಇಲ್ಲವೆಂದು ತಿಳಿಸಿರುತ್ತಾರೆ ಮತ್ತು ಈ ಮದ್ಯವನ್ನು ಸುರತ್ಕಲ್ ಕಡೆಗೆ ಕೊಂಡು ಹೋಗುವುದಾಗಿ ತಿಳಿಸಿರುತ್ತಾರೆ. ನಂತರ ಸದ್ರಿ ವಾಹನದ ನೊಂದಣಿ ಸಂಖ್ಯೆ ಪರಿಶೀಲಿಸಲಾಗಿ ಸಂ: ಕೆಎ–20–0022 ಎಂಬುದಾಗಿ ಮುದ್ರಿತವಾಗಿದ್ದು, ಸದ್ರಿ ವಾಹನದಲ್ಲಿದ್ದ ಆಪಾದಿತನ ಹೆಸರು ವಿಳಾಸ ಕೇಳಲಾಗಿ ಚಾಲಕನ ಹೆಸರು ಜಾನ್ ಬ್ಯಾಪ್ಟಿಸ್ಟ್ ಡಿಸೋಜ, ಪ್ರಾಯ:46 ವರ್ಷ, ಬಿನ್:ಮಾರ್ಷಲ್ ಡಿಸೋಜಾ, ಜೆ.ಸಿ ವಿಲ್ಲಾ ಮನೆ,11–11–2–1 ಪದವು,ಕುಲಶೇಖರ ಮಂಗಳೂರು ಹಾಗೂ ಇನ್ನೊಬ್ಬ ವ್ಯಕ್ತಿ ಅಶೋಕ ಪ್ರಾಯ:46 ವರ್ಷ ಬಿನ್:ಜೆ ಎಸ್ ಮೋಟಯ್ಯ, ಹರಿಕೃಪ ನಿವಾಸ, ಮಹಾಕಾಳಿಪಡ್ಪು, ಜೆಪ್ಪು ಮಂಗಳೂರು ಎಂದು ತಿಳಿಸಿರುತ್ತಾನೆ. ನಂತರ ವಾಹನದ ಇಂಜಿನ್ ಮತ್ತು ಚಾಸಿಸ ನಂಬರನ್ನು ಪರಿಶೀಲಿಸಲಾಯಿತು. ಈ ರೀತಿಯಾಗಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡುವುದು ಅಬಕಾರಿ ಕಾನೂನು ಉಲ್ಲಂಘನೆ ಎಂದು ಆತನಿಗೆ ತಿಳಿಸಲಾಯಿತು. ನಂತರ ದೊರೆತ 2 ಚೀಲಗಳಿಂದ 750 ಎಂಎಲ್ ತಲಾ 2 ಬಾಟಲಿಗಳಂತೆ ಒಟ್ಟು 4 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ತೆಗೆದು ಅವುಗಳ ಬಾಯಿಗೆ ಬಟ್ಟೆ ಸುತ್ತಿ, ದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ಆರೋಪಿ ಹೆಸರು, ವಿಳಾಸ ಇರುವ ಗುರುತು ಚೀಟಿ ಅಂಟಿಸಲಾಯಿತು. ಮಾದರಿ ಸೀಲನ್ನು ಸ್ಥಳದಲ್ಲೇ ತಯಾರಿಸಲಾಯ್ತು. ನಂತರ ಇಬ್ಬರು ಆರೋಪಿಗಳನ್ನು ದಸ್ತಗಿರಿ ಮಾಡಿ ಮದ್ಯ ಹಾಗೂ ವಾಹನ ಸಮೇತ ಕಛೇರಿಗೆ ತರಲಾಯ್ತು.ಈ ಮಹಜರು ಸಮಯ 11 ಗಂಟೆಯಿಂದ 11–30 ಗಂಟೆವರೆಗೂ ತಯಾರಿಸ ಲಾಯ್ತು. ಸದ್ರಿ ಅಪರಾಧ ಸ್ಥಳದಲ್ಲಿ ಜರುಗಿಸಿದ ಪಂಚ ಮಹಜರನ್ನು ವಿಚಾರಣೆ ಸಂದರ್ಭದಲ್ಲಿ ನಿಶಾನೆ ಪಿ–1 ಎಂದು ಮತ್ತು ಸದ್ರಿ ಮಹಜರಿಗೆ ನಾನು ಸಹಿ ಮಾಡಿರುವುದನ್ನು ನಿಶಾನೆ ಪಿ–1 ಎ ಎಂದು ಗುರುತಿಸಲಾಯಿತು. ನಂತರ ಕಛೇರಿಗೆ ಬಂದು ಈ ಪ್ರಕರಣಕ್ಕೆ ಸಂಬಂಧಿಸಿ ಅಪರಾಧ ಸಂ:ಅಸಇ(1) ಪ್ರಮಾವ ಸಂ:18–07–08 ದಿ:16–12–2007ರಂತೆ ಆರೋಪಿ 1 ಮತ್ತು 2ನೇ ಆರೋಪಿಗಳ ವಿರುದ್ಧ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11 ಮತ್ತು 14 ರಂತೆ ಅಪರಾಧ ಗುರುತಿಸಿ ಕಲಂ 32,34,38 ಎ ರೀತ್ಯಾ ಶಿಕ್ಷಾರ್ಹವಾಗಿ ಪ್ರಕರಣ ದಾಖಲಿಸಿರುತ್ತೇನೆ ಮತ್ತು ಸದ್ರಿ ಪ್ರಕರಣಕ್ಕೆ ಸಂಬಂಧಿಸಿ ವಶಪಡಿಸಿಕೊಳ್ಳಲಾಗಿರುವ ಸೊತ್ತು ವರದಿಗಳನ್ನು ತಯಾರಿಸಿದ್ದು, ಪ್ರಕರಣದ ಪ್ರಮಾವ, ಮಹಜರು ಮತ್ತು ಸೊತ್ತು ಪಟ್ಟಿಗಳೊಂದಿಗೆ ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ನ್ಯಾಯಾಂಗ ತನಿಖೆಗೆ ಒಳಪಡಿಸಿ, ಸೊತ್ತುಪಟ್ಟಿ ಮತ್ತು ಶೋದನಾ ವರದಿಯನ್ನು ನ್ಯಾಯಾಲಯಕ್ಕೆ ಒಪ್ಪಿಸಿರುತ್ತೇನೆ. ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಪ್ರ.ಮಾ.ವನ್ನು ನಿಶಾನೆ ಪಿ–2 ಎಂದು ಮತ್ತು ಸದ್ರಿ ಪ್ರಮಾವಗೆ ಸೊತ್ತುಗಳ ವರದಿಯನ್ನು ನಿಶಾನೆ ಪಿ–3 ಮತ್ತು ಅದಕ್ಕೆ ಸಹಿ ಮಾಡಿರುವುದನ್ನು ನಿಶಾನೆ ಪಿ–3 ಎ ಎಂದು ಗುರುತಿಸಿರುತ್ತೇನೆ. ನಂತರ ಸದ್ರಿ ಜಪ್ತುಪಡಿಸಿದ ಸೊತ್ತುಗಳಿಂದ ತೆಗೆಯಲಾದ 8 ಬಾಟಲಿಗಳನ್ನು ದಿ:20–12–2007ರಂದು ಮುಖ್ಯ ರಾಸಾಯನಿಕ ತಜ್ಞರು, ಬೆಂಗಳೂರು ಇವರಿಗೆ ನಮ್ಮ ಕಛೇರಿ ಅಬಕಾರಿ ರಕ್ಷಕ ಉಮೇಶ್‌ನ ಮೂಲಕ ಕಳುಹಿಸಿ ಕೊಟ್ಟಿರುತ್ತೇನೆ. ನಂತರ ದಿ:4–2–2008ರಂದು ಮುಖ್ಯ ರಾಸಾಯನಿಕ ವಿಶ್ಲೇಷಕರು, ಬೆಂಗಳೂರು ಇವರಿಂದ ವರದಿ ಸಂ:ಸಿಸಿಎಲ್–473/2008 ರಂದು ವರದಿಯನ್ನು ಪಡೆದಿರುತ್ತೇನೆ. ನಂತರ ದಿ:20–12–2007ರಂದು ಪ್ರಾ.ಸಾ ಅ ಉಡುಪಿ ಜಿಲ್ಲೆ ಇವರಿಗೆ ಕೆಎ–20–0022 ಮಾರುತಿ ಒಮ್ನಿ ಇದರ ಬಿ ವಹಿ ವರದಿ ಸಲ್ಲಿಸುವ ಬಗ್ಗೆ ಪತ್ರ ಬರೆದು ದಿ:28–12–2007ರಂದು ಬಿ ವಹಿಯನ್ನು ಪಡೆದಿರುತ್ತೇನೆ. ಸದ್ರಿ ಸಾರಿಗೆ ಅಧಿಕಾರಿಯವರ ಬಿ ವಹಿ ವರದಿ ಮೂಲ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿದ್ದು, ಸದ್ರಿ ದಾಖಲೆಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯ್ತು. ದಿ:23–2–2008ರಂದು ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರ ಪ್ರಾಧಿಕಾರಕ್ಕೆ ತನಿಖಾ ವರದಿ ಒಪ್ಪಿಸಿ ವಶಪಡಿಸಿಕೊಳ್ಳಲಾಗಿರುವ ಸೊತ್ತುಗಳನ್ನು ಮುಟ್ಟುಗೋಲು

ಹಾಕಿಕೊಳ್ಳುವ ಬಗ್ಗೆ ಪ್ರಸ್ತಾವನೆ ಒಪ್ಪಿಸಿರುತ್ತೇನೆ. ಸದ್ರಿ ವರದಿಯನ್ನು ನಿಶಾನೆ ಪಿ–5 ಹಾಗೂ ನನ್ನ ಸಹಿಯನ್ನು ನಿಶಾನೆ ಪಿ–5 ಎ ಎಂದು ಗುರುತಿಸಲಾಯ್ತು ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು:** ರಕ್ಷಣಾ ಪರ ವಕೀಲರಿಂದ ನಾನು ದಿ:16–12–2007ರಂದು ಅಪರಾಧ ಸ್ಥಳದಲ್ಲಿ ತಯಾರಿಸಿದ ಶೋಧನಾ ವಾರೆಂಟ್ ಪಡೆಯಲು ಸಾಧ್ಯವಾಗದಿರುವ ಬಗ್ಗೆ ಕಲಂ 54ರಡಿ ತಯಾರಿಸಿದ ವರದಿ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಫಿರ್ಯಾದುದಾರನಾಗಿಯೂ, ತನಿಖಾಧಿಕಾರಿಯಾಗಿಯೂ ನಾನೇ ಆಗಿರುತ್ತೇನೆ, ನಾನು ಮೊಕದ್ದಮೆ ದಾಖಲಿಸಿದ ಬಗ್ಗೆ ಖಚಿತ ವರ್ತಮಾನ ಸಿಕ್ಕಿರುತ್ತದೆ. ನಾನು ಸದ್ರಿ ವರ್ತಮಾನದ ಮೇರೆಗೆ ಮಂಗಳೂರು ಮಹಾನಗರ ಪಾಲಿಕೆ ಕದ್ರಿ ಪ್ರದೇಶದಲ್ಲಿ ವಾಹನದ ಚಲನ ವಲನ ಬಗ್ಗೆ ರಸ್ತೆಗಾವಲು ನಡೆಸಿರುತ್ತೇನೆ. ಮಲ್ಲಿಕಟ್ಟೆಯಿಂದ ನಂತೂರಿಗೆ ಬರುವ ರಸ್ತೆಯಲ್ಲಿ ನಾನು ವಾಹನ ತಪಾಸಣೆಗಾಗಿ ಕಾದಿರುತ್ತೇನೆ. ನಾನು ತಯಾರಿಸಿದ ಸ್ಥಳ ಮಹಜರಿನಲ್ಲಿ ಅಪರಾಧ ಸ್ಥಳದ ಚೆಕ್ ಬಂದಿ ವಿವರಗಳನ್ನು ನಮೂದಿಸಿರುವುದಿಲ್ಲ. ನಾನು ಪತ್ತೆ ಹಚ್ಚಿದ ಅಪರಾಧ ಸ್ಥಳವು ಜನನಿಬಿಡ ವಾಣಿಜ್ಯ ಸ್ಥಳವಾಗಿರುತ್ತದೆ. ನಾವು ವಶಪಡಿಸಿದ ವಾಹನದ ಚಾಲಕ ನಾವು ನಿಲ್ಲಿಸಲು ಸನ್ನೆ ಮಾಡಿದಾಗ ಓಡಿ ಹೋಗಿ ತಪ್ಪಿಸಲು ಪ್ರಯತ್ನಿಸಿರುತ್ತಾನೆ . ಆದರೆ ಅವನನ್ನು ನಮ್ಮ ಸಿಬ್ಬಂದಿ ಮತ್ತು ನಾನು ತಡೆಹಿಡಿದಿರುತ್ತೇವೆ. ನಾವು ಇಲಾಖಾ ಸಿಬ್ಬಂಧಿಯೊಟ್ಟಿಗೆ 3 ಜನ ಕಾರ್ಯಾಚರಣೆಯಲ್ಲಿರುತ್ತೇವೆ. ನಾವು ವಾಹನವನ್ನು ತಡೆಹಿಡಿದು ಶೋಧಿಸುವಾಗ ಇಬ್ಬರು ನಮ್ಮ ಹತ್ತಿರ ಬಂದಿರುತ್ತಾರೆ. ನಾವು ಅಪರಾಧ ಪತ್ತೆ ಹಚ್ಚಿದ ಸ್ಥಳದಿಂದ ಮಲ್ಲಿಕಟ್ಟೆ ಪ್ರದೇಶದಲ್ಲಿರುವ ಜುಗುಲ್ ಬಾರ್ 300 ಮೀಟರು ದೂರದಲ್ಲಿರುತ್ತದೆ. ಮತ್ತು ಅದೇ ಪ್ರದೇಶದ ಸುವರ್ಣ ಬಾರ್ 50 ಮೀಟರು ದೂರದಲ್ಲಿರುತ್ತದೆ. ನಾನು ಪ್ರಕರಣ ಪತ್ತೆ ಆದ ದಿವಸ ಯಾವುದೇ ಕಾರ್ರ್ಯಚರಣೆಗೆ ಹೋಗಿಲ್ಲ ಎಂದರೆ ಸರಿ ಅಲ್ಲ ನಾನು ಆ ಸ್ಥಳಕ್ಕೆ ಹೋಗದಿರುವ ಕಾರಣ ಚೆಕ್ ಬಂದಿ ಬರೆಯಲು ಸಾದ್ಯವಾಗಿಲ್ಲ ಎಂಬುವುದು ಸರಿ ಅಲ್ಲ. ನಾನು ಪ್ರಕರಣ ಸ್ಥಳದಲ್ಲಿ ಸುಮಾರು 5–6 ಪಂಚ ಸಾಕ್ಷಿಗಳನ್ನು ಬರ ಮಾಡಲು ಪ್ರಯತ್ನಿಸಿರುತ್ತೇನೆ. ಪಂಚ ಮಹಜರಿಗೆ ಸಹಿ ಮಾಡಿದ ಉಮಾನಾಥ ಎಂಬವರು ಅದೇ ಸ್ಥಳದಲ್ಲಿ ಹಾಜರಿರುವರು. ಅವರ ಹೆಸರು ವಿಳಾಸ ಕೇಳಲಾಗಿ ತಾನು ಮಂಗಳೂರು ಮಹಾನಗರ ಪಾಲಿಕೆಯ ಪಚ್ಚನಾಡಿ ಎಂಬ ಸ್ಥಳದ ನಿವಾಸಿ ಎಂದು ತಿಳಿಸಿರುತ್ತಾರೆ. ನಮ್ಮ ತಕ್ಷೀರು ಸ್ಥಳದಿಂದ ನಗರದ ಅಗ್ನೇಸ್ ಕಾಲೇಜ್ ಸುಮಾರು 300 ಮೀಟರು ದೂರದಲ್ಲಿ ಇರುತ್ತದೆ.ಈ ಮೊಕದ್ದಮೆಯನ್ನು ಸುಳ್ಳು ದಾಖಲೆ ಸೃಷ್ಟಿಸಿ ಕೇಸು ದಾಖಲಿಸಲಾಗಿದೆ ಎಂದು, ತಕ್ಷೀರು ಸ್ಥಳಕ್ಕೆ ಬಂದೇ ಇಲ್ಲ ಎಂದರೆ ಸರಿ ಅಲ್ಲ ಮತ್ತು ವಾಹನ ಕೂಡಾ ತಕ್ಷೀರು ಸ್ಥಳಕ್ಕೆ ಬಂದಿರುವುದಿಲ್ಲ ಎಂದರೆ ಸರಿ ಅಲ್ಲ ಎಂದು ಪಾಟೀ ಸವಾಲಿಗೆ ಸಾಕ್ಷಿದಾರರು ಉತ್ತರಿಸಿರುತ್ತಾರೆ.

**ಡಿಡಬ್ಲ್ಯೂ–1:**

ಶ್ರೀ.ಜಾನ್ ಬ್ಯಾಪ್ಟಿಸ್ಟ್ ಡಿಸೋಜ, ಜೆ.ಸಿ ವಿಲ್ಲಾ, ಕಾರ್ಮಿಕ ಕಾಲೋನಿ, ಶಕ್ತಿನಗರ, ಮಂಗಳೂರು ಇವರು ದಿ:27–10–2009ರಂದು ಈ ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ನೀಡುತ್ತಾ, ನಾನು ಕೆಎ–20–0022 ಮಾರುತಿ ಒಮ್ನಿ ವ್ಯಾನಿನ ಮಾಲೀಕನಾಗಿರುತ್ತೇನೆ. ಸದ್ರಿ ವಾಹನ 1992 ರ ತಯಾರಿಕಾ ವಾಹನವಾಗಿರುತ್ತದೆ. ನಾನು ಕ್ಯಾಟರಿಂಗ್ ಅಡುಗೆಯವನಾಗಿರುತ್ತೇನೆ. ನಾನು ಈ ವಾಹನವನ್ನು ನನ್ನ ಉದ್ಯೋಗ ಕ್ಯಾಂಟರಿಂಗ್‌ನ ಅಡಿಗೆ ಕೆಲಸ ಕಾರ್ಯಗಳಿಗೆ ಉಪಯೋಗಿಸುತ್ತೇನೆ. ನನ್ನ ಜೀವನಾಧಾರಕ್ಕಾಗಿ ಈ ಕ್ಯಾಟರಿಂಗ್ ಅಡಿಗೆ ಕೆಲಸ ಮಾಡುತ್ತಿದ್ದೇನೆ. ದಿ:16–12–2007ರಂದು ನನಗೆ ಅಬಕಾರಿ ನಿರೀಕ್ಷಕರು ಎಂಬುದಾಗಿ ತಿಳಿಸಿ ನೀವು ಮರಿಹಿಲ್ ಅಬಕಾರಿ ಭವನದಲ್ಲಿರುವ ನಮ್ಮ ಕಛೇರಿಗೆ ಬಂದು ಹೋಗಿ ಎಂದು ತಿಳಿಸಿದರು .ನಾನು ತಕ್ಷಣ ನಮ್ಮ ವಾಹನ ಮಾರುತಿ ಒಮಿನಿಯಲ್ಲಿ ಅವರ ಕಛೇರಿಗೆ ಹೋಗಿರುತ್ತೇನೆ. ನಂತರ ಕಛೇರಿಗೆ ಬಂದಾಗ ಅಲ್ಲಿ ಅಬಕಾರಿ ನಿರೀಕ್ಷಕರು ಒಬ್ಬರೇ ಇದ್ದು, ನಾನು ಅವರ ಬಳಿ ಹೋದಾಗ ನನ್ನನ್ನು ಕಛೇರಿಯಲ್ಲಿ ಕುಳಿತುಕೊಳ್ಳಲು ತಿಳಿಸಿದರು. ಅವರ ಕಛೇರಿಯಲ್ಲಿ ನಾನು 11 ಗಂಟೆಯಿಂದ 5 ಗಂಟೆಯವರೆಗೆ ಕುಳಿತುಕೊಂಡಿರುತ್ತೇನೆ. ಈ ಸಮಯದಲ್ಲಿ ಇನ್ಸ್‌ಪೆಕ್ಟರ್ ಕೆಲವು ಕಾಗದ ಪತ್ರಗಳನ್ನು ನನಗೆ ಕೊಟ್ಟು ಅವುಗಳಿಗೆ ಸಹಿ ಹಾಕಲು ಸೂಚಿಸಿದರು. ಅವರ ಸೂಚನೆ ಮೇರೆಗೆ ನಾನು ಆ ದಾಖಲೆ ಪತ್ರಗಳಿಗೆ ಸಹಿ ಮಾಡಿರುತ್ತೇನೆ. ನಂತರ ಸುಮಾರು 6 ಗಂಟೆಗೆ ನನ್ನನ್ನು ಬೊಂದೆಲ್‌ನಲ್ಲಿ ಒಂದು ಸರ್ಕಾರಿ ಕ್ವಾಟ್ರಸ್‌ಗೆ ಕರೆದೊಯ್ದು ಅಲ್ಲಿಂದ ನನ್ನನ್ನು ಮಂಗಳೂರಿನ ಸಬ್ ಜೈಲಿಗೆ ಕರೆದುಕೊಂಡು ಹೋಗಿ ನನ್ನನ್ನು ಜೈಲಿನ ಒಳಗೆ ಕಳುಹಿಸಿದರು. ನಮ್ಮ ಮನೆಯವರಿಗೆ ನಾನು ಮೇರಿಹಿಲ್ ಅಬಕಾರಿ ಕಚೇರಿಗೆ ಹೋಗಿ ಬರುವೆನು ಎಂದು ತಿಳಿಸಿ ಹೊರಟಿರುವುದರಿಂದ ಮತ್ತು ನಾನು ಮನೆಗೆ ವಾಪಸು ಬಾರದಿರುವ ಕಾರಣ, ಮರುದಿವಸ ನನ್ನ ಹೆಂಡತಿ ಮತ್ತು ಭಾವ ಅಬಕಾರಿ ಕಛೇರಿಗೆ ಬಂದು ವಿಚಾರಿಸಿದಾಗ ನನ್ನನ್ನು ಜೈಲಿನಲ್ಲಿರಿಸಲಾಗಿದೆ ಎಂದು ತಿಳಿಸಿದ ಮೇರೆಗೆ ನ್ಯಾಯಾಲಯದಿಂದ ನನ್ನನ್ನು ಬಿಡುಗಡೆಗೊಳಿಸಿದರು. ನನಗೆ ಅಬಕಾರಿ ಉಪ ನಿರೀಕ್ಷಕರು ತಮ್ಮ ಕಚೇರಿಯಿಂದ ಸಂಜೆ 6

ಗಂಟೆಗೆ ಕೊಂಡೊಯ್ಯುವಾಗ ಜೀಪಿನಲ್ಲಿ ಮತ್ತೊಬ್ಬ ವ್ಯಕ್ತಿಯನ್ನು ಕರೆದುಕೊಂಡು ಹೋಗಿರುತ್ತಾರೆ. ಆ ವ್ಯಕ್ತಿಯ ಪರಿಚಯ ನನಗಿರಲಿಲ್ಲ. ನಾನು ನ್ಯಾಯಾಲಯದಿಂದ ಬಿಡುಗಡೆ ಆದ ನಂತರ ದಿನಾಂಕ: 4–1–2008 ರಂದು ನನ್ನ ವಿರುದ್ಧ ದಾಖಲಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಘನ ರಾಜ್ಯಪಾಲರು, ಕರ್ನಾಟಕ ರಾಜ್ಯ ಇವರಿಗೆ ಅರ್ಜಿಯನ್ನು ಕಳುಹಿಸಿದ್ದು, ಸದ್ರಿ ನನ್ನ ಅರ್ಜಿ ಸ್ವೀಕೃತವಾಗಿರುವ ಬಗ್ಗೆ ರಾಜ್ಯಪಾಲರ ಕಛೇರಿಯಿಂದ ಕ್ರಮ ಸಂ:ಪಿಎಸ್ಆರ್ಇಪಿ:469:08 ದಿ:7–1–2008ರಂತೆ ಸ್ವೀಕೃತ ಪತ್ರ ತಲುಪಿರುತ್ತದೆ. ಸದ್ರಿ ಸ್ವೀಕೃತಿ ಪತ್ರವನ್ನು ಈ ದಿನ ವಿಚಾರಣೆ ಸಂದರ್ಭದಲ್ಲಿ ನ್ಯಾಯಾಲಯ ದಲ್ಲಿ ಹಾಜರುಪಡಿಸಿದ್ದು, ಅದನ್ನು ನಿಶಾನೆ ಡಿ–1 ಎಂದು ಗುರುತಿಸಲಾಯಿತು. ನಾನು ಕಾನೂನು ಬಾಹಿರವಾಗಿ ಯಾವುದೇ ಅಕ್ರಮ ಎಸಗಿರುವುದಿಲ್ಲ. ನನ್ನ ಮೇಲೆ ಸುಳ್ಳು ಕೇಸು ದಾಖಲಿಸಿರುತ್ತಾರೆ. ಆದ್ದರಿಂದ ಸದ್ರಿ ವಾಹನವನ್ನು ನನಗೆ ಖಾಯಂ ನೆಲೆಯಲ್ಲಿ ಬಿಡುಗಡೆಗೊಳಿಸಿಕೊಡಬೇಕಾಗಿ ನ್ಯಾಯಾಲಯದಲ್ಲಿ ವಿನಂತಿಸಿಕೊಳ್ಳುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು: ಎ.ಡಿ.ಪಿರವರಿಂದ**

ನಾನು ಸಲ್ಲಿಸಿದ್ದ ದೂರು ಮನವಿ ಬಗ್ಗೆ ದೂರು ಅಂಶಗಳು ಸತ್ಯವೆಂದು ತಿಳಿಯಲಾಗಿದೆ ಎಂಬುದರ ಬಗ್ಗೆ ಯಾವುದೇ ಹಿಂಬರಹ ಅಥವಾ ಮಾಹಿತಿ ನನ್ನಲ್ಲಿ ಸ್ವೀಕೃತವಾಗಿರುವುದಿಲ್ಲ. ನಾನು ಕೊಟ್ಟ ದೂರಿಗೆ ಸಂಬಂಧಿಸಿದಂತೆ ನನ್ನ ವಿಚಾರಣೆಗಾಗಿ ಅಬಕಾರಿ ಅಧಿಕಾರಿಗಳು ನನ್ನ ಮನೆಗೆ ಬಂದಿರುತ್ತಾರೆ. ನಂತರ ದಿ:30–1–2008ರಂದು ಎಸ್ಡಿಕೆ:39:ಸಾದೂವಿ:2007–08 ರಂದು ನನ್ನ ದೂರು ನಿಜಾಂಶದಿಂದ ಕೂಡಿಲ್ಲ ಎಂದು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಕಚೇರಿಯಿಂದ ಹಿಂಬರಹ ನೀಡಿರುತ್ತಾರೆ ಎಂದರೆ ಸರಿಯಲ್ಲ. ನಾನು ಹೊಂದಿರುವ ವಾಹನ ಖಾಸಗಿ ಉಪಯೋಗ ವಾಹನವಾಗಿದ್ದು,ಬಾಡಿಗೆ ವಾಹನವಾಗಿರುವುದಿಲ್ಲ. ಮತ್ತು ಉದ್ಯೋಗಕ್ಕೆ ಉಪಯೋಗಿಸುವ ವಾಹನವಾಗಿರುವುದಿಲ್ಲ. ನಾನು ನನ್ನ ಮೇಲೆ ದಾಖಲಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಅಬಕಾರಿ ನಿರೀಕ್ಷಕರು ಮೇಲಾಧಿಕಾರಿಗಳಿಗೆ, ವ್ಯಾಪ್ತಿಯ ನ್ಯಾಯಾಲಯ ಅಥವಾ ಪೊಲೀಸ್ ಇಲಾಖೆಯ ವ್ಯಾಪ್ತಿಯ ಠಾಣಾಧಿಕಾರಿಗಳಿಗೆ ಯಾವುದೇ ದೂರು ನೀಡಿರುವುದಿಲ್ಲ. ನನ್ನ ಮೇಲೆ ದಾಖಲಿಸಿರುವ ಪ್ರಕರಣಕ್ಕೆ ಸಂಬಂಧಿಸಿ ಅಬಕಾರಿ ಅಧಿಕಾರಿಯವರು ಮಂಗಳೂರು ಜೆಎಂಎಫ್ಸಿ ನ್ಯಾಯಾಲಯ ದಲ್ಲಿ ನನ್ನ ವಿರುದ್ಧ ದೋಷಾರೋಪಣಾ ಪಟ್ಟಿ ಒಪ್ಪಿಸಿರುತ್ತಾರೆ. ಇದು ನನಗೆ ತಿಳಿದಿರುತ್ತದೆ. ನನ್ನ ವಿರುದ್ಧ ದೋಷಾರೋಪಣಾ ಪಟ್ಟಿ ಕೇಸು ದಾಖಲಿಸಿರುವ ಅಬಕಾರಿ ಉಪ ನಿರೀಕ್ಷಕರವರಾದ ವಿನೋದ್ ಕುಮಾರ್ ಎಂಬವರನ್ನು ನಾನು ಹಿಂದೆಂದೂ ಸಂಪರ್ಕ ಹೊಂದಿರುವುದಿಲ್ಲ,ಹಾಗೂ ಅವರ ಪರಿಚಯ ಸಹ ಇರುವುದಿಲ್ಲ. ಅವರ ಮತ್ತು ನನ್ನ ಮದ್ಯೆ ಯಾವುದೇ ವೈಮನಸ್ಸು ಮತ್ತು ವೈರತ್ವ ಇರುವುದಿಲ್ಲ. ನಾನು ಕೊಟ್ಟ ದೂರಿನ ಬಗ್ಗೆ ದ.ಕ ಜಿಲ್ಲಾ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಕಚೇರಿಯಿಂದ ನನಗೆ ನೀಡಿರುವ ದಿ:31–1–2008ರ ಹಿಂಬರಹದ ಪ್ರತಿಯನ್ನು ನಾನು ನೋಡಿದ್ದು,ಅದನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ದಿನಾಂಕ:16–12–2007 ರಂದು ನಾನು ವಾಹನದಲ್ಲಿ ಅಕ್ರಮವಾಗಿ 2 ಚೀಲಗಳಲ್ಲಿ 750ಎಂಎಲ್ ನ ಸಾಮರ್ಥ್ಯದ ಬಾಟಲಿಗಳಲ್ಲಿ ಮದ್ಯವನ್ನು (90ಲೀ) ಸಾಗಿಸಿದ ಕಾರಣ ಅಬಕಾರಿ ನಿರೀಕ್ಷಕರು ನನ್ನ ವಿರುದ್ಧ ಕಾನೂನು ರೀತ್ಯಾ ಕೇಸು ದಾಖಲಿಸಿದ್ದಾರೆ ಎಂದರೆ ಸರಿ ಅಲ್ಲ. ಹಾಗೂ ನನಗೂ ಈ ಪ್ರಕರಣಕ್ಕೂ ಯಾವುದೇ ಸಂಬಂಧ ಇರುವುದಿಲ್ಲ. ನಾನು ನ್ಯಾಯಾಲಯದ ಮುಂದೆ ವಾಹನವನ್ನು ನನ್ನ ಖಾಯಂ ಸ್ವಾದೀನಕ್ಕೆ ಪಡೆಯುವ ಉದ್ದೇಶಕ್ಕಾಗಿ ಸುಳ್ಳು ಸಾಕ್ಷಿ ನೀಡುತ್ತಿದ್ದೇನೆ ಎಂದರೆ ಸರಿ ಅಲ್ಲ. ಆ ದಿವಸ ನನ್ನೊಂದಿಗೆ ನನ್ನ ವಿರುದ್ಧ ದಾಖಲಿಸಿರುವ ಪ್ರಕರಣದಲ್ಲಿ ಒಳಗೊಂಡಿರುವ ಇನ್ನೊಬ್ಬ ವ್ಯಕ್ತಿ ಅಶೋಕ ಎಂಬವನೊಂದಿಗೆ ನನ್ನ ಸಂಪರ್ಕ ಪರಿಚಯ ಇದೆ ಎಂದರೆ ಸರಿಯಲ್ಲ ಎಂದು ಪಾಟಿ ಸವಾಲಿಗೆ ಉತ್ತರ ನೀಡಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಮತ್ತು ಪ್ರಾ.ಸ–1 ಮತ್ತು ರಕ್ಷಣಾ ಸಾಕ್ಷಿ ವಿಚಾರಣೆಯನ್ನು ಕೈಗೊಂಡು ಪಾಟಿ ಸವಾಲು ನಡೆಸಲಾಗಿದ್ದು, ಅಭಿಯೋಗದ ಪರ ಮತ್ತು ರಕ್ಷಣಾ ವಕೀಲರ ವಾದ ವಿವಾದವನ್ನು ಆಲಿಸಿ ಹಾಗೂ ಪ್ರಕರಣದ ತನಿಖಾಧಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ದಿ:16–12–2007ರಂದು ಜಪ್ತು ಪಡಿಸಿರುವ ಮಾರುತಿ ಒಮಿನಿ ವ್ಯಾನ್ ಸಂ:KA-20-0022ರಲ್ಲಿ 750 ಎಂಎಲ್‌ನ 120 ಬಾಟಲಿಗಳಲ್ಲಿ 90 ಲೀಟರು ಗೋವಾ ನಿರ್ಮಿತ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಿರುವುದನ್ನು, ಅಪರಾಧ ಸ್ಥಳದಲ್ಲಿ ಪಂಚರ ಸಮಕ್ಷಮ ಮಹಜರು ಜರುಗಿಸಿ ವಶಪಡಿಸಿಕೊಂಡಿದ್ದು ಅಕ್ರಮ ಮದ್ಯಸಾಗಾಟ ಮಾಡುತ್ತಿದ್ದ ವಾಹನವನ್ನು ಆರ್.ಸಿ ಮಾಲೀಕರೇ ಚಲಾಯಿಸುತ್ತಿದ್ದು ಸದ್ರಿ ಅಕ್ರಮ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ಅಪರಾಧ ಸ್ಥಳದಲ್ಲಿ ವಾಹನ ಸಮೇತ ವಾಹನ ಮಾಲೀಕರಾದ ಶ್ರೀ ಜ್ಯಾನ್ ಬ್ಯಾಪ್ಟಿನ್ ಡಿಸೋಜ, ಜೆ.ಸಿ ವಿಲ್ಲಾ,ಮನೆ ನಂ:11–11–2–1, ವಾರ್ಡ್ ನಂ:3, ಪದುವಾ, ಮಂಗಳೂರು ತಾಲೂಕು ಇವರನ್ನು ದಸ್ತಗಿರಿ ಮಾಡಲಾಗಿರುವುದರಿಂದ, ವಾಹನ ಮಾರುತಿ ಒಮಿನಿ ವ್ಯಾನ್ ಸಂ: KA-20-0022 ಇದನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ವಾಹನ ಮಾಲೀಕರು ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತ ತಾನು ಕ್ಯಾಟರಿಂಗ್ ವ್ಯವಹಾರದ ವ್ಯಕ್ತಿಯಾಗಿದ್ದು, ಪ್ರಕರಣ ಸಂಧರ್ಭದಲ್ಲಿ ಸುಳ್ಳು ಆರೋಪ ಹೊರಿಸಿ ವಾಹನವನ್ನು ಜಪ್ತುಪಡಿಸಿಕೊಂಡು ತನ್ನನ್ನು ದಸ್ತಗಿರಿ ಮಾಡಿರುವುದಾಗಿ ತಿಳಿಸಿರುವರಾದರೂ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆ ಮಾಡುವ ಸಂದರ್ಭದಲ್ಲಿ ವಾಹನದ ಮಾಲೀಕರೇ ವಾಹನವನ್ನು ಚಲಾಯಿಸುತ್ತಿದುದ್ದರಿಂದ ಜಪ್ತು ಪಡಿಸಿಕೊಂಡ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಲಾಗಿಲ್ಲ ಎಂಬ ಅಂಶವನ್ನು ಸಾಬೀತುಪಡಿಸಲು ವಿಪಲರಾಗಿರುತ್ತಾರೆ. ಕಾರಣ ವಾಹನದ ಮಾಲೀಕರು ತನ್ನ ಅರಿವಿಗೆ ಬಾರದೇ ಸದ್ರಿ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆ ಬಳಸಲಾಗಿಲ್ಲವೆಂದು ಈ ಪ್ರಾಧಿಕಾರದ ಮುಂದೆ ಸಾಭೀತುಪಡಿಸಲು ಯಾವುದೇ ಪುರಾವೆಗಳನ್ನು ನೀಡಲು ವಿಫಲರಾಗಿರುವುದರಿಂದ ,ಸದ್ರಿ ಅಕ್ರಮ ಮದ್ಯ ಸಾಗಾಣಿಕೆಯನ್ನು ವಾಹನದಲ್ಲಿ ಖುದ್ದಾಗಿ ಅವರೇ ಸಾಗಾಣಿಕೆ ಮಾಡಿರುವುದು ಈ ಪ್ರಾಧಿಕಾರವು ಮನಗಂಡಿರುವುದರಿಂದ 2ನೇ ವಿವಾಧಾಂಶವನ್ನು ನಕಾರಾತ್ಮಕವಾಗಿ ನಿರ್ಣಯಿಸಬಹುದಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ನಂತರ ತನಿಖಾಧಿಕಾರಿಗಳು ಸಲ್ಲಿಸಿರುವ ಅಬಕಾರಿ ಕಾಯಿದೆ ಕಲಂ 54ರ ವರದಿಯ ಪ್ರತಿಯೊಂದಿಗೆ ಲಭ್ಯವಿರುವ ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಲಾಗಿ ಜಪ್ತು ಪಡಿಸಲಾಗಿರುವ ಮಾರುತಿ ಒಮಿನಿ ವ್ಯಾನನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮಾರುತಿ ಒಮಿನಿ ವ್ಯಾನ್ ಸಂ:KA-20-0022ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲ0 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ,ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ಜಾರಿ ಮತ್ತು ತನಿಖೆ ಇವರ ತಕ್ಷೀರು ಸಂ:18/2007 ದಿ:16–12–2007ರಲ್ಲಿ ಜಪ್ತು ಪಡಿಸಿರುವ ಮಾರುತಿ ಒಮಿನಿ ಕಾರು ಸಂ: KA-20-0022 (ಚಾಸೀಸ್ ನಂ:907279 ಮತ್ತು ಇಂಜಿನ್ ನಂ: 740248)ನ್ನು ನಿಯಮ 43 ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:4–7–2008ರಂದು ತಾತ್ಕಾಲಿಕವಾಗಿ ವಾಹನ ಬಿಡುಗಡೆಗೊಳಿಸಿ ಹೊರಡಿಸಿದ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಅರ್.ಸಿ ಮಾಲೀಕರು ಸದ್ರಿ ಮದ್ಯಂತರ ಬಿಡುಗಡೆ ಹೊಂದಿರುವ ಮಾರುತಿ ಒಮಿನಿ ಕಾರು ಸಂ: KA-20-0022 ನ್ನು ಈ ಆದೇಶದ 30 ದಿನಗಳೊಳಗೆ ಅಬಕಾರಿ ಉಪ ನಿರೀಕ್ಷಕರು(1) ಮಂಗಳೂರು ಉತ್ತರ ಜಾರಿ ಮತ್ತು ತನಿಖೆ ಇವರ ಮೂಲಕ ಇಲಾಖಾ ವಶಕ್ಕೆ ಒಪ್ಪಿಸಲು ಆದೇಶಿಸಿದೆ. ಅಬಕಾರಿ ಉಪ ನಿರೀಕ್ಷಕರು(1) ಮಂಗಳೂರು ಉತ್ತರ ವಲಯ–I ಇವರು, ಸದ್ರಿ ಮುಟ್ಟುಗೋಲು ವಾಹನವನ್ನು ಆರ್.ಸಿ ಮಾಲೀಕರಿಂದ ಇಲಾಖಾ ವಶಕ್ಕೆ ಪಡೆದು ಅವರ ಸುಪರ್ಧಿಯಲ್ಲಿ ಇರಿಸಿಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು ಆರ್.ಸಿ ಮಾಲಿಕರು ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸರ್ಕಾರಕ್ಕೆ ಈ ಪ್ರಾಧಿಕಾರದಲ್ಲಿ ಅಥವಾ ಅಬಕಾರಿ ಉಪ ನಿರೀಕ್ಷಕರು(1) ಮಂಗಳೂರು ಉತ್ತರ ವಲಯ–I ಇವರಲ್ಲಿ ಒಪ್ಪಿಸಲು ವಿಫಲರಾದಲ್ಲಿ, ಅವರು ಈ ಪ್ರಾಧಿಕಾರಕ್ಕೆ ವಾಹನದ ಬಗ್ಗೆ ಭದ್ರತೆಯಾಗಿ ಒಪ್ಪಿಸಿದ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿ ಸರ್ಕಾರದ ಕಂದಾಯ ಠೇವಣಿ ಶೀರ್ಷಿಕೆ ಸಂ: 8443 00 101 001ರಲ್ಲಿ ಜಮೆ ಮಾಡಲಾಗಿರುವ ಮೊತ್ತ ರೂ.28,000/– ನ್ನು ಅಬಕಾರಿ ಇಲಾಖಾ ಲೆಕ್ಕ ಶೀರ್ಷಿಕೆ ಸಂ: 0039 00 150 00 0ರಲ್ಲಿ ಹೊಂದಾಣಿಕೆ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿ:25–3–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್

ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀ ವಿನೋದ್ ಕುಮಾರ್ ,ಅಬಕಾರಿ ಉಪ ನಿರೀಕ್ಷಕರು
ಮಂಗಳೂರು ಉತ್ತರ ಜಾರಿ ಮತ್ತು ತನಿಖೆ

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

| | | |
|---|---|---|
| ನಿಶಾನೆ ಪಿ–I | : | ಮಹಜರು ಪ್ರತಿ |
| ನಿಶಾನೆ ಪಿ–Iಎ | : | ಅದರ ಮೇಲಿನ ಸಹಿ |
| ನಿಶಾನೆ ಪಿ–2 | : | ಪ್ರಥಮ ಮಾಹಿತಿ ವರದಿ ಪ್ರತಿ |
| ನಿಶಾನೆ ಪಿ–2ಎ | : | ಅದರ ಮೇಲಿನ ಸಹಿ |
| ನಿಶಾನೆ ಪಿ–3 | : | ಸೊತ್ತು ಪಟ್ಟಿ |
| ನಿಶಾನೆ ಪಿ–3ಎ | : | ಅದರ ಮೇಲಿನ ಸಹಿ |
| ನಿಶಾನೆ ಪಿ–4 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–5 | : | ತನಿಖಾ ವರದಿ |
| ನಿಶಾನೆ ಪಿ–5ಎ | : | ಸಾಕ್ಷಿ ಸಹಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–**

ಡಿಡಬ್ಲ್ಯೂ–1 – ಜ್ಯಾನ್ ಬ್ಯಾಪ್ಟಿನ್ ಡಿಸೋಜ,
ಜೆ.ಸಿ ವಿಲ್ಲಾ,ಕಾರ್ಮಿಕ ಕಾಲನಿ, ಶಕ್ತಿ ನಗರ, ಮಂಗಳೂರು.

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–

ನಿಶಾನೆ ಡಿ–1 – ಮಾನ್ಯ ಕರ್ನಾಟಕ ರಾಜ್ಯ ಪಾಲರಿಗೆ ಸಲ್ಲಿಸಲಾದ ದೂರಿನ ಕುರಿತು ಹಿಂಬರಹ ಪತ್ರ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.809

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/408/ಡಿಟಿಸಿಆರ್/2000–2001, ದಿನಾಂಕ:25ನೇ ಮಾರ್ಚ್, 2010**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಪುತ್ತೂರು ಉಪ ವಿಭಾಗ, ಪುತ್ತೂರು.

**ಆರೋಪಿಗಳು:**
ಚಾಲಕ ಹಾಗೂ ಸಹಚಾಲಕರು ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**
ಶ್ರೀ ಶ್ರೀಧರ ಗೌಡ, ಬಿನ್:ನಾರ್ಣಪ್ಪ ಗೌಡ,
ವಾಸ:ಸೋಜ ಲೇಔಟ್, ಜ್ಯೋತಿ ನಿಲಯ, ಪುತ್ತೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28–05–2001 ರಂದು ಪುತ್ತೂರು ತಾಲ್ಲೂಕು ಕೌಕ್ರಾಡಿ ಗ್ರಾಮದ ಪೆರಿಯಶಾಂತಿ ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಿಂದ ಕೊಕ್ಕಡ ತಿರುಗುವ ತಿರುವು ರಸ್ತೆಯ ಬದಿಯಲ್ಲಿ ಫಿರ್ಯಾದಿದಾರರು ಅವರ ಸಿಬ್ಬಂದಿಗಳೊಂದಿಗೆ ರಸ್ತೆಗಾವಲು ನಡೆಸಿ, ಸಂಶಯಾಸ್ಪದವಾದ ವಾಹನಗಳ ತಪಾಸಣೆ ಮಾಡುತ್ತಿರುವಾಗ ಉಪ್ಪಿನಂಗಡಿ ಕಡೆಯಿಂದ ಶಿರಾಡಿ ಕಡೆಗೆ ಒಂದು ಬಿಳಿ ಬಣ್ಣದ ಮಾರುತಿ ಓಮಿನಿ ವ್ಯಾನ್ ಸಂ:ಕೆಎ–19ಎಂ–5364 ವೇಗವಾಗಿ ಬರುತ್ತಿರುವುದನ್ನು ಕಂಡು, ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ವಾಹನದಲ್ಲಿ ಚಾಲಕನ ಸಮೇತ ಇಬ್ಬರು ವ್ಯಕ್ತಿಗಳು ಇದ್ದು, ಚಾಲಕನು ವಾಹನವನ್ನು ನಿಲ್ಲಿಸದೇ

ವೇಗವಾಗಿ ಮುಂದಕ್ಕೆ ಚಲಾಯಿಸಿಕೊಂಡು ಹೋದನು.ಸದ್ರಿ ವಾಹನವನ್ನು ಬೆನ್ನಟ್ಟಿ, ಕೌಕ್ರಾಡಿ ಗ್ರಾಮದ ಪೆರಿಯ ಶಾಂತಿ ಎಂಬಲ್ಲಿ ವಾಹನದ ಚಾಲಕನು ವಾಹನವನ್ನು ರಸ್ತೆ ಬದಿಯಲ್ಲಿ ನಿಲ್ಲಿಸಿ,ಚಾಲಕನ ಸಮೇತ ಇನ್ನಿಬ್ಬರು ವ್ಯಕ್ತಿಗಳು ಓಡಿ ಪರಾರಿಯಾದರು. ನಂತರ ವಾಹನದ ಒಳಗೆ ಇಣುಕಿ ನೋಡಲಾಗಿ ಸೀಟಿನ ಹಿಂಬದಿಯಲ್ಲಿ 15 ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು.ವಾಹನವನ್ನು ಶೋಧಿಸಲು ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ತರಲು ಅಸಾಧ್ಯವಾದ ಕಾರಣ ಸಾಕ್ಷಿಯ ಬಗ್ಗೆ ಯಾವುದೇ ಖಾಸಗಿ ವ್ಯಕ್ತಿಗಳು ಸಿಗದೇ ಇರುವುದರಿಂದ ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿಯಾಗಿ ಇರಿಸಿಕೊಂಡು,ಅವರ ಸಮಕ್ಷಮ ಸರ್ಚ್ ಮೆಮೊವನ್ನು ತಯಾರಿಸಿ,ವಾಹನ ಶೋಧನೆ ನಡೆಸಲಾಯಿತು. ವಾಹನದಲ್ಲಿದ್ದ ಒಟ್ಟು 15 ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ ಅವುಗಳಲ್ಲಿ ಮದ್ಯದ ಬಾಟಲಿಗಳು ತುಂಬಿಸಿ ಇರಿಸಲಾಗಿರುವುದು ಪತ್ತೆಯಾಯಿತು.

1) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –9.000 ಲೀಟರ್ ಮದ್ಯ.
2) 375 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 24 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –9.000 ಲೀಟರ್ ಮದ್ಯ.
3) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 96 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –17.280 ಲೀಟರ್ ಮದ್ಯ.
4) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –9.000 ಲೀಟರ್ ಮದ್ಯ.
5) 375 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 24 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –9.000 ಲೀಟರ್ ಮದ್ಯ.
6) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 48 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –8.640 ಲೀಟರ್ ಮದ್ಯ.
7) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಮೈಸೂರು ಲ್ಯಾನ್ಸರ್ ವಿಸ್ಕಿ –9.000 ಲೀಟರ್ ಮದ್ಯ.
8) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 144 ಬಾಟಲಿಗಳಂತೆ ಇರುವ ಮೈಸೂರು ಲ್ಯಾನ್ಸರ್ ವಿಸ್ಕಿ –25.920 ಲೀಟರ್ ಮದ್ಯ.
9) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 11 ಬಾಟಲಿಗಳಂತೆ ಇರುವ ಬಾಸ್ ಜಿನ್ –8.250ಲೀಟರ್ ಮದ್ಯ.
10) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 138 ಬಾಟಲಿಗಳಂತೆ ಇರುವ ಬಾಸ್ ಜಿನ್ – 24–.840 ಲೀಟರ್ ಮದ್ಯ.

ಮೇಲಿನ 15 ಪೆಟ್ಟಿಗೆಗಳಲ್ಲಿ ಒಟ್ಟು 129.930 ಲೀಟರ್ ಭಾರತೀಯ ತಯಾರಿಕಾ ಮದ್ಯವನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲಾಗಿರುವುದು ಕಂಡು ಬಂದಿದ್ದು,ಈ ಬಗ್ಗೆ ಕಾರಿನಲ್ಲಿ ಸಾಗಾಟ ಮಾಡುತ್ತಿರುವ ಬಗ್ಗೆ ಯಾವುದೇ ಪರವಾನಿಗೆ ದೊರೆತಿರುವುದಿಲ್ಲ. ಇದು ಅಕ್ರಮ ಮದ್ಯವೆಂದು ಪರಿಗಣಿಸಿ, ಸದ್ರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 10 ಸ್ಯಾಂಪಲ್ ಬಾಟಲಿಗಳನ್ನು ತೆಗೆದು,ಬಾಟಲಿಗಳ ಬಾಯಿಗೆ ಬಟ್ಟೆದಾರವನ್ನು ಕಟ್ಟಿ,ಇಲಾಖಾ ಸೀಲಿನಿಂದ ಮೊಹರು ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲೇ ತಯಾರಿಸಿ, ಮದ್ಯದ ರಟ್ಟಿನ ಪೆಟ್ಟಿಗೆಗಳಿಗೆ ಗುರುತು ಚೀಟಿಗಳನ್ನು ಅಂಟಿಸಲಾಯಿತು. ಮಹಜರನ್ನು ಸ್ಥಳದಲ್ಲೇ ಬರೆದು, ಸಿಬ್ಬಂದಿಯವರ ಸಹಿಯನ್ನು ಪಡೆದುಕೊಂಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 11,14 ರ ಪ್ರಕಾರ ಅಪರಾಧ ಹಾಗೂ ಸೆಕ್ಷನ್ 32 ಮತ್ತು 34, 38ಎ, 43 ರ ಪ್ರಕಾರ ಶಿಕ್ಷಾರ್ಹವಾಗಿ ರುವುದರಿಂದ, ಮಾರುತಿ ಓಮ್ನಿ ಕಾರು ಹಾಗೂ ಮದ್ಯವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:12/2000–2001 ದಿ:28–05–2001 ರಂತೆ ಪ್ರಕರಣ ನೊಂದಾಯಿಸಿ, ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಯವರಿಗೂ ವರದಿ ಸಲ್ಲಿಸಿರುತ್ತಾರೆ. ಸದ್ರಿ ಪ್ರಕರಣದ ಸೊತ್ತುಗಳನ್ನು ಇಟ್ಟುಕೊಂಡು,ಮುಂದಿನ ತನಿಖೆ ನಡೆಸುವ ಬಗ್ಗೆ ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ,ಪುತ್ತೂರು ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದ ಅನುಮತಿಯನ್ನು ಪಡೆದು, ಸದ್ರಿ ಸೊತ್ತುಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ ಓಮ್ನಿ ಕಾರು ಸಂ:ಕೆಎ–19ಎಂ–5364 ವಾಹನದ ನೊಂದಣಿ ಮಾಲೀಕನೆಂದು ಶ್ರೀ ಶ್ರೀಧರ ಗೌಡ, ಬಿನ್:ನಾರ್ಣಪ್ಪ ಗೌಡ,ವಾಸ:ಸೋಜ ಲೇಔಟ್, ಜ್ಯೋತಿ ನಿಲಯ,ಪುತ್ತೂರು ಇವರು ತಮ್ಮ

ವಕೀಲರ ಮುಖಾಂತರ ದಿ:14–06–2001 ರಂದು ಮನವಿ ಸಲ್ಲಿಸಿ,ಸದ್ರಿ ಪ್ರಕರಣದ ಮುಟ್ಟುಗೋಲು ನಡವಳಿಗಳನ್ನು ಕಾಯ್ದಿರಿಸಿ,ತಾತ್ಕಾಲಿಕ ನೆಲೆಯಲ್ಲಿ ವಾಹನವನ್ನು ಬಿಟ್ಟುಕೊಡಬೇಕೆಂದು,ಕೋರಿರುತ್ತಾರೆ. ಅಲ್ಲದೇ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದ್ದು, ಇದರ ಸಂಖ್ಯೆ:ಡಬ್ಲ್ಯೂಪಿ ನಂ.32831/2001 ದಿ:23–8–2001ರಲ್ಲಿ ಅರ್ಜಿದಾರರ ಮನವಿಯನ್ನು ಪರಿಗಣಿಸಿ, ಕಾನೂನಿನಡಿಯಲ್ಲಿ ಸೂಕ್ತ ಆದೇಶವನ್ನು ನೀಡಬೇಕೆಂದು ಹಾಗೂ ಈ ಆದೇಶ ಸ್ಥಿರೀಕರಿಸಿದ ಎರಡು ವಾರದಲ್ಲಿ ವಿಲೆವಾರಿಗೊಳಿಸಲು ನ್ಯಾಯಾಲಯವು ಆದೇಶಿಸಿರುತ್ತದೆ. ಅರ್ಜಿದಾರರ ಕೋರಿಕೆಯಂತೆ ಪ್ರಕರಣದಲ್ಲಿ ಜಪ್ತು ಮಾಡಿರುವ ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಮೌಲ್ಯಕ್ಕೆ ಷರತಿಲ್ಲದ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಬೇಕೆಂದು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ, ಮಂಗಳೂರು ಇವರ ಮಧ್ಯಂತರ ಆದೇಶ ಸಂ:ಎಸ್‌ಡಿಕೆ/408/ಡಿಟಿಸಿಆರ್/2000–2001 ದಿ:18–9–2001ರ ಆದೇಶದಲ್ಲಿ ಜಪ್ತು ಮಾಡಿರುವ ವಾಹನ ಸಂ:ಕೆಎ–19ಎಂ–5364 ಕ್ಕೆ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಮೌಲ್ಯಕ್ಕೆ ಅನುಗುಣವಾಗಿ ಷರತ್ತಿಲ್ಲದ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಿದಲ್ಲಿ ವಾಹನವನ್ನು ಅರ್ಜಿದಾರರ ಸುಪರ್ದಿಗೆ ನೀಡಲಾಗುವುದೆಂದು ಆದೇಶಿಸಿರುತ್ತಾರೆ.

ಸದ್ರಿ ಆದೇಶದ ವಿರುದ್ಧ ಅರ್ಜಿದಾರರು ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂ:123/2001ನ್ನು ಸಲ್ಲಿಸಿದ್ದು, ಇವರ ಮೇಲ್ಮನವಿಯನ್ನು ಪರಿಗಣಿಸಿದ ದ.ಕ ಜಿಲ್ಲಾ ಸತ್ರ ನ್ಯಾಯಾಲಯ, ಮಂಗಳೂರು 3ನೇ ಹೆಚ್ಚುವರಿ ಸೆಷನ್ಸ್ ಜಡ್ಜ್ ರವರ ತೀರ್ಪು ಆದೇಶ ಸಂ:123/2001 ದಿ:06–10–2001ರಲ್ಲಿ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ವಾಹನದ ಮೌಲ್ಯಕ್ಕೆ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಬೇಕೆಂಬ ಷರತ್ತನ್ನು ತಳ್ಳಿಹಾಕಿ, ಅರ್ಜಿದಾರರ ಪರ ಪ್ರಚಲಿತ ರೂ.3,00,000/– ಮೌಲ್ಯದ ಇಂಡೆಮ್ನಿಟಿ ಬಾಂಡ್ ಹಾಗೂ ಇಬ್ಬರ ಜಾಮೀನನ್ನು ಅಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗುವ ರೀತಿಯಲ್ಲಿ ನೀಡಬೇಕೆಂದು ಹಾಗೂ ವಿಧಿಸಿರುವ ಷರತ್ತುಗಳಿಗೆ ಬದ್ಧರಾದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ. ಸತ್ರ ನ್ಯಾಯಾಲಯದ ಆದೇಶದಂತೆ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ. 3,00,000/– ಮೌಲ್ಯದ ಇಂಡೆಮ್ನಿಟಿ ಬಾಂಡ್ ಮತ್ತು ಇದಕ್ಕೆ ಸಮಾನವಾಗಿ ಇಬ್ಬರು ಜಾಮೀನುದಾರರಾದ (1) ಶ್ರೀ ಕೃಷ್ಣಪ್ಪ ಗೌಡ,ಬಿನ್:ಐತಪ್ಪ ಗೌಡ,ಪ್ರಾಯ:50ವರ್ಷ,ಪಂಜಿಂಗ ಹೌಸ್,ಪುತ್ತೂರು ಮತ್ತು (2) ಶ್ರೀ ಸಂಜೀವ ನಾಯ್ಕ್,ಬಿನ್:ಐತಪ್ಪ ನಾಯ್ಕ್,ವಾಸ:ಮಜಲ್ ಹೌಸ್,ಶಾಂತಿಗೋಡು,ಪುತ್ತೂರು ತಾಲೂಕು ಇವರುಗಳ ಜಾಮೀನಿನ ಆರ್.ಟಿ.ಸಿ.ಯನ್ನು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.ಸದ್ರಿ ದಾಖಲಾತಿಗಳನ್ನು ಪರಿಶೀಲಿಸಿದ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ ಜಿಲ್ಲೆ,ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂ:ಎಸ್‌ಡಿಕೆ/408/ ಡಿಟಿಸಿಆರ್/2000–2001 ದಿ:11–12–2001ರ ಆದೇಶದಲ್ಲಿ ಮಾನ್ಯ ಸತ್ರ ನ್ಯಾಯಾಲಯದ ಆದೇಶದ ಪ್ರಕಾರ ತಕ್ಷೀರಿನಲ್ಲಿ ಜಪ್ತು ಮಾಡಿರುವ ವಾಹನ ಸಂ:ಕೆಎ–19 ಎಂ–5364 ಮಾರುತಿ ವ್ಯಾನಿನ ಮುಟ್ಟುಗೋಲು ನಡವಳಿಗಳನ್ನು ಕಾಯ್ದಿರಿಸಿ, ಕೆಲವು ಷರತ್ತುಗಳನ್ವಯ ಅರ್ಜಿದಾರರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ,ಪುತ್ತೂರು ಇವರ ತನಿಖಾ ವರದಿ ಸಂ:57/2000–2001 ದಿ:16–07–2001 ರ ವರದಿಯಲ್ಲಿ ತಕ್ಷೀರಿನಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಮದ್ಯದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ಇವರ ಪತ್ರ ಸಂ:1056–10 ದಿ:27–08–2001 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.80% ಇರುವುದಾಗಿ ಹಾಗೂ ಮದ್ಯವು ಮಾನವ ಸೇವನೆಗೆ ಯೋಗ್ಯವಾಗಿದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರುರವರ ಮುಟ್ಟುಗೋಲು ಆದೇಶ ಸಂಖ್ಯೆ:ಎಸ್‌ಡಿಕೆ/408/ಡಿಟಿಸಿಆರ್/2000–2001 ದಿ:04–12–2001ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ 129–930 ಲೀಟರ್ ಮದ್ಯದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ, ಉಳಿದ 125–400 ಲೀಟರ್ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ಸಮಕ್ಷಮ ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಆದೇಶಿಸಿರುತ್ತಾರೆ.

ಈ ಪ್ರಕರಣದಲ್ಲಿ ಸರಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ, ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:28.05.2001ರಂದು ಮಾರುತಿ ಓಮಿನಿ ಕಾರು ಸಂಖ್ಯೆ: ಕೆಎ–19–ಎಂ–5364–ರಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: ೧**

ಶ್ರೀ ನಾರಾಯಣ ಆಳ್ವ, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ಈ ಪ್ರಕರಣದ ಫಿರ್ಯಾದಿದಾರರು ಮತ್ತು ತನಿಖಾಧಿಕಾರಿಯಾಗಿದ್ದು, ಇವರು ದಿ:29–09–2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ಸೆಪ್ಟೆಂಬರ್ 2000 ದಿಂದ ಅಕ್ಟೋಬರ್ 2001 ರವರೆಗೆ ಪುತ್ತೂರು ವಲಯದಲ್ಲಿ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸಿದ್ದು, ತಾನು ದಿ:28–05–2001ರಂದು ಸಾಯಂಕಾಲ 5–30 ಕ್ಕೆ ಪುತ್ತೂರು ತಾಲೂಕು ಕೌಕ್ರಾಡಿ ಗ್ರಾಮದ ಪೆರಿಯಶಾಂತಿ ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಿಂದ ಕೊಕ್ಕಡ ತಿರುಗುವ ತಿರುವು ರಸ್ತೆಯ ಬದಿಯಲ್ಲಿ ತಮ್ಮ ಸಿಬ್ಬಂದಿಗಳೊಂದಿಗೆ ರಸ್ತೆಗಾವಲು ನಡೆಸಿ, ಸಂಶಯಾಸ್ಪದವಾದ ವಾಹನಗಳ ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ಉಪ್ಪಿನಂಗಡಿ ಕಡೆಯಿಂದ ಶಿರಾಡಿ ಕಡೆಗೆ ಒಂದು ಬಿಳಿ ಬಣ್ಣದ ಮಾರುತಿ ಓಮ್ನಿ ವ್ಯಾನ್ ಸಂ:ಕೆಎ–19ಎಂ–5364 ವೇಗವಾಗಿ ಬರುತ್ತಿರುವುದನ್ನು ಕಂಡು,ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ವಾಹನದಲ್ಲಿ ಚಾಲಕನ ಸಮೇತ ಇಬ್ಬರು ವ್ಯಕ್ತಿಗಳು ಇದ್ದು,ಚಾಲಕನು ವಾಹನವನ್ನು ನಿಲ್ಲಿಸದೇ ವೇಗವಾಗಿ ಮುಂದಕ್ಕೆ ಚಲಾಯಿಸಿಕೊಂಡು ಹೋದನು.ಸದ್ರಿ ವಾಹನವನ್ನು ಬೆನ್ನಟ್ಟಿ,ಕೌಕ್ರಾಡಿ ಗ್ರಾಮದ ಪೆರಿಯ ಶಾಂತಿ ಎಂಬಲ್ಲಿ ವಾಹನದ ಚಾಲಕನು ವಾಹನವನ್ನು ರಸ್ತೆ ಬದಿಯಲ್ಲಿ ನಿಲ್ಲಿಸಿ,ಚಾಲಕನ ಸಮೇತ ಇನ್ನಿಬ್ಬರು ವ್ಯಕ್ತಿಗಳು ಓಡಿ ಪರಾರಿಯಾದರು. ನಂತರ ವಾಹನದ ಒಳಗೆ ಇಣುಕಿ ನೋಡಲಾಗಿ ಸೀಟಿನ ಹಿಂಬದಿಯಲ್ಲಿ 15 ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು.ವಾಹನವನ್ನು ಶೋಧಿಸಲು ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ತರಲು ಅಸಾಧ್ಯವಾದ ಕಾರಣ ಸಾಕ್ಷಿಯ ಬಗ್ಗೆ ಯಾವುದೇ ಖಾಸಗಿ ವ್ಯಕ್ತಿಗಳು ಸಿಗದೇ ಇರುವುದರಿಂದ ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿಯಾಗಿ ಇರಿಸಿಕೊಂಡು,ಅವರ ಸಮಕ್ಷಮ ಸರ್ಚ್ ಮೆಮೊವನ್ನು ತಯಾರಿಸಿ,ವಾಹನ ಶೋಧನೆ ನಡೆಸಲಾಯಿತು. ವಾಹನದಲ್ಲಿದ್ದ ಒಟ್ಟು 15 ರಟ್ಟಿನ ಪೆಟ್ಟಿಗೆ ಮದ್ಯದ ಬಾಟಲಿಗಳು ಈ ಕೆಳಗಿನಂತೆ ಇರುತ್ತದೆ.

1) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –9.000 ಲೀಟರ್ ಮದ್ಯ.
2) 375 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 24 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –9.000 ಲೀಟರ್ ಮದ್ಯ.
3) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 96 ಬಾಟಲಿಗಳಂತೆ ಇರುವ ಹೈವೇ ನಂ.1 ಫೈನ್ ವಿಸ್ಕಿ –17.280 ಲೀಟರ್ ಮದ್ಯ.
4) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –9.000 ಲೀಟರ್ ಮದ್ಯ.
5) 375 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 24 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –9.000 ಲೀಟರ್ ಮದ್ಯ.
6) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 48 ಬಾಟಲಿಗಳಂತೆ ಇರುವ ಡಿಮಾಂಡ್ ಡಿಲಕ್ಸ್ ವಿಸ್ಕಿ –8.640 ಲೀಟರ್ ಮದ್ಯ.
7) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 12 ಬಾಟಲಿಗಳಂತೆ ಇರುವ ಮೈಸೂರು ಲ್ಯಾನ್ಸರ್ ವಿಸ್ಕಿ –9.000 ಲೀಟರ್ ಮದ್ಯ.

8) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 144 ಬಾಟಲಿಗಳಂತೆ ಇರುವ ಮೈಸೂರು ಲ್ಯಾನ್ಸರ್ ವಿಸ್ಕಿ –25.920 ಲೀಟರ್ ಮದ್ಯ.

9) 750 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 11 ಬಾಟಲಿಗಳಂತೆ ಇರುವ ಬಾಸ್ ಜಿನ್ –8.250ಲೀಟರ್ ಮದ್ಯ.

10) 180 ಎಂ.ಎಲ್ ನ ರಟ್ಟಿನ ಪೆಟ್ಟಿಗೆಯಲ್ಲಿ 138 ಬಾಟಲಿಗಳಂತೆ ಇರುವ ಬಾಸ್ ಜಿನ್ – 24–.840 ಲೀಟರ್ ಮದ್ಯ.

ಸದ್ರಿ 15 ಪೆಟ್ಟಿಗೆಗಳಲ್ಲಿ ಒಟ್ಟು 129.930 ಲೀಟರ್ ಭಾರತೀಯ ತಯಾರಿಕಾ ಮದ್ಯ ಕಂಡು ಬಂದಿದ್ದು,ಈ ಬಗ್ಗೆ ಕಾರಿನಲ್ಲಿ ಸಾಗಾಟ ಮಾಡುತ್ತಿರುವ ಬಗ್ಗೆ ಯಾವುದೇ ಪರವಾನಿಗೆ ದೊರೆತಿರುವುದಿಲ್ಲ.ಇದು ಅಕ್ರಮ ಮದ್ಯವೆಂದು ಪರಿಗಣಿಸಿ, ಸದ್ರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 10 ಸ್ಯಾಂಪಲ್ ಬಾಟಲಿಗಳನ್ನು ತೆಗೆದು,ಬಾಟಲಿಗಳ ಬಾಯಿಗೆ ಬಟ್ಟೆದಾರವನ್ನು ಕಟ್ಟಿ, ಇಲಾಖಾ ಸೀಲಿನಿಂದ ಮೊಹರು ಮಾಡಲಾಯಿತು. ಮಾದರಿ ಮೊಹರನ್ನು ಸ್ಥಳದಲ್ಲೇ ತಯಾರಿಸಿ, ಮದ್ಯದ ರಟ್ಟಿನ ಪೆಟ್ಟಿಗೆಗಳಿಗೆ ಗುರುತು ಚೀಟಿಗಳನ್ನು ಅಂಟಿಸಲಾಯಿತು. ಮಹಜರನ್ನು ಸ್ಥಳದಲ್ಲೇ ಬರೆದು, ಸಿಬ್ಬಂದಿಯವರ ಸಹಿಯನ್ನು ಪಡೆದುಕೊಂಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 11,14 ರ ಪ್ರಕಾರ ಅಪರಾಧ ಹಾಗೂ ಸೆಕ್ಷನ್ 32 ಮತ್ತು 34 ,38 ಎ , 43 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಮಾರುತಿ ಓಮ್ನಿ ಕಾರು ಹಾಗೂ ಮದ್ಯವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು,ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:12/ 2000–2001 ದಿ:28–05–2001 ರಂತೆ ಪ್ರಕರಣ ನೊಂದಾಯಿಸಿ,ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಯವರಿಗೂ ವರದಿ ಸಲ್ಲಿಸಿರುತ್ತೇನೆ. ಅಕ್ಟೋಬರ್ 2001 ರಂದು ಪುತ್ತೂರು ವಲಯದಿಂದ ವರ್ಗಾವಣೆಗೊಂಡ ಪ್ರಯುಕ್ತ ಪ್ರಕರಣದ ಕಡತವನ್ನು ಸ್ವೀಕರಿಸಿಕೊಂಡು, ತನಿಖೆಯನ್ನು ಮುಂದುವರಿಸಿರುತ್ತೇನೆ. ದಿ:15–12–2001ರ ಅಧಿಕೃತ ಅಧಿಕಾರಿಯವರ ಆದೇಶದ ಮೇರೆಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ಅರ್ಜಿದಾರರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತೇನೆ.ದಿ:20–12–2001ರಂದು ವಾಹನಕ್ಕೆ ಸಂಬಂಧಪಟ್ಟ ಬಿ ಅಬ್‌ಸ್ಟ್ರಾಕ್ಟ್ ವರದಿಯನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ತರಿಸಿರುತ್ತೇನೆ. ತಾನು ದಿ:06–11–2001ರಂದು ಪ್ರಕರಣಕ್ಕೆ ಸಂಬಂಧಿಸಿದ ಮಾದರಿ ಬಾಟಲಿಗಳನ್ನು ತಜ್ಞರು ಪರಿಶೀಲಿಸಿ ಈ ಬಗ್ಗೆ ಒಂದು ವರದಿಯನ್ನು ಕೊಟ್ಟಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–1 ಎಂದು ಮಹಜರಿನ ಪ್ರತಿಯನ್ನು ನಿಶಾನೆ ಪಿ–2 ಎಂದು ಸರ್ಚ್ ಮೆಮೊವನ್ನು ನಿಶಾನೆ ಪಿ–3 ಎಂದು ಮತ್ತು ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರು ಹಾಗೂ ಅವರ ಪರ ವಕೀಲರು ಗೈರು ಹಾಜರಿದ್ದು, ಯಾವುದೇ ಪಾಟಿ ಸವಾಲನ್ನು ಮಾಡಿರುವುದಿಲ್ಲ.ಆದುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ:2**

ಶ್ರೀ ಪಿ.ಪದ್ಮನಾಭ, ಅಬಕಾರಿ ರಕ್ಷಕ,ಪುತ್ತೂರು ವಲಯ,ಪುತ್ತೂರು ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು,ಇವರು ದಿ:16–2–2005ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ.ತಾನು ದಿ:31–07–2001 ರಂದು ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ ಇವರಿಂದ ರಾಸಾಯನಿಕ ಪರೀಕ್ಷೆಗಾಗಿ 10 ಮಾದರಿ ಸೀಸೆಗಳನ್ನು ಪಡೆದುಕೊಂಡು,ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ.ನಂತರ ದಿ:27–08–2001 ರಂದು ತಜ್ಞರು ಪರಿಶೀಲಿಸಿದ ಮಾದರಿ ಸೀಸೆಗಳನ್ನು ತಜ್ಞರಿಂದ ಪಡೆದುಕೊಂಡು,ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ಅದರೊಂದಿಗೆ ವರದಿಯನ್ನು ಸಹ ಕೊಟ್ಟಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಮಾದರಿ ಸೀಸೆಗಳು ಯಾವ ಪ್ರಕರಣಕ್ಕೆ ಸಂಬಂಧಿಸಿದ್ದು ಎಂದು ತನಗೆ ತಿಳಿದಿತ್ತು ಎಂದು ಸಾಕ್ಷಿ ನುಡಿದಿರುತ್ತಾರೆ.

ಸಾಕ್ಷಿದಾರರು ನೀಡಿರುವ ಹೇಳಿಕೆಗಳು ದಾಖಲಿಸಿದ ತಕ್ಷೀರಿಗೆ ಸಂಬಂಧಿಸಿ ಮಹಜರಿಗೆ ಒಂದಕ್ಕೊಂದು ಪೂರಕವಾಗಿದ್ದು, ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ಜಪ್ತು ಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯ ದಾಸ್ತಾನು ಹೊಂದಿ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ,ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಅರ್ಜಿದಾರರಿಗೂ ಹಾಗೂ ಅವರ ಪರ

ವಕೀಲರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ಮತ್ತು ಪ್ರತಿರಕ್ಷೆ ಸಾಕ್ಷಿಗಳನ್ನು ಹಾಜರುಪಡಿಸಲು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸುಗಳನ್ನು ಅರ್ಜಿದಾರರು ಹಾಗೂ ಅವರ ಪರ ವಕೀಲರು ಸ್ವೀಕರಿಸಿದರೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ವಿಚಾರಣೆಗಾಗಿ ಹಾಜರಾಗಿರುವುದಿಲ್ಲ. ವಾಹನದ ಮಾಲೀಕರಿಗೆ ಹಲವಾರು ಬಾರಿ ಕಾಲಾವಕಾಶ ನೀಡಲಾಗಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ನಿರಪರಾಧವನ್ನು ಸಾಬೀತುಪಡಿಸಲು ಯಾವುದೇ ಆಸಕ್ತಿ ತೋರಿರುವುದಿಲ್ಲ. ಆದುದರಿಂದ ಅರ್ಜಿದಾರರು ಸಾಕ್ಷ್ಯಾಧಾರಗಳನ್ನು ನೀಡಲು ಹಾಜರಾಗದಿರುವುದನ್ನು ಗಮನಿಸಿದಾಗ, ವಾಹನದ ಮಾಲೀಕರೇ ಸ್ವತ: ಆರೋಪಿಗಳೊಂದಿಗೆ ಕೂಡಿಕೊಂಡು ಅಕ್ರಮ ಮದ್ಯ ಸಾಗಾಟ ಮಾಡಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ ಹಾಗೂ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಲು ನೋಟೀಸು ನೀಡಿದರೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ಹಾಜರುಪಡಿಸಿರುವುದಿಲ್ಲ. ಆದುದರಿಂದ ಅವರ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಹಾಗೂ ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ ಓಮಿನಿ ವ್ಯಾನ್ ಸಂ:ಕೆಎ–19ಎಂ–5364 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/408/ಡಿಟಿಸಿಆರ್/2000–2001 ದಿನಾಂಕ:25ನೇ ಮಾರ್ಚ್, 2010**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಪುತ್ತೂರು ಉಪ ವಿಭಾಗ,ಪುತ್ತೂರು ಇವರ ತಕ್ಷೀರು ಸಂ:12/2000–2001 ದಿ:28–5–2001 ರಲ್ಲಿ ಜಪ್ತುಪಡಿಸಿರುವ ವಾಹನ ಮಾರುತಿ ಓಮ್ನಿ ವ್ಯಾನ್ ಸಂ:ಕೆಎ–19ಎಂ–5364ನ್ನು ಈ ಪ್ರಾಧಿಕಾರದ ಆದೇಶದ ಸಂಖ್ಯೆ:ಎಸ್‌ಡಿಕೆ/408/ಡಿಟಿಸಿಆರ್/2000–2001 ದಿ: 11–12–2001 ರಲ್ಲಿ ವಾಹನದ ಆರ್.ಸಿ. ಮಾಲೀಕರಾದ ಶ್ರೀ ಶ್ರೀಧರ ಗೌಡ, ಬಿನ್:ನಾರ್ಣಪ್ಪ ಗೌಡ, ವಾಸ:ಸೋಜ ಲೇಔಟ್, ಜ್ಯೋತಿ ನಿಲಯ,ಪುತ್ತೂರು ಇವರ ಪರ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ರದ್ದುಗೊಳಿಸಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಈ ಆದೇಶದ 30 ದಿವಸದೊಳಗೆ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ಕಚೇರಿಯಲ್ಲಿ ಹಾಜರುಪಡಿಸಲು ಆದೇಶಿಸಿದೆ. ವಾಹನದ ಮಾಲೀಕರು ಸದ್ರಿ ವಾಹನವನ್ನು ಸಕಾಲದಲ್ಲಿ ಇಲಾಖೆಯ ಸುಪರ್ಧಿಗೆ ಒಪ್ಪಿಸಲು ತಪ್ಪಿಸಿದಲ್ಲಿ, ಮುಟ್ಟುಗೋಲು ವಾಹನವನ್ನು ಜಪ್ತುಪಡಿಸಲು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರಿಗೆ ಅಧಿಕಾರ ನೀಡಿದೆ ಹಾಗೂ ವಾಹನದ ಪ್ರಸಕ್ತ ಮೌಲ್ಯವನ್ನು ನಿಗದಿಪಡಿಸಿ ಸದ್ರಿ ಪ್ರಚಲಿತ ಮೌಲ್ಯಕ್ಕೆ ಅನುಗುಣವಾಗಿ ವಾಹನ ಮಾಲೀಕರು ನೀಡಿರುವ ಇಂಡೆಮ್ನಿಟಿ ಬಾಂಡ್‌ನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದೆ. ಆರ್.ಸಿ.ಮಾಲೀಕರು ನಿಗದಿಪಡಿಸಿದ ಬಾಂಡ್ ಮೌಲ್ಯವನ್ನು ಸರ್ಕಾರಕ್ಕೆ ಪಾವತಿಸಲು ವಿಫಲರಾದಲ್ಲಿ ಜಾಮೀನುದಾರರಾದ ಶ್ರೀ ಕೃಷ್ಣಪ್ಪ ಗೌಡ,ಬಿನ್:ಐತಪ್ಪ ಗೌಡ, ಪ್ರಾಯ: 50ವರ್ಷ, ಪಂಜಿಂಗ ಹೌಸ್, ಪುತ್ತೂರು ಮತ್ತು ಶ್ರೀ ಸಂಜೀವ ನಾಯ್ಕ್, ಬಿನ್:ಐತಪ್ಪ ನಾಯ್ಕ್, ವಾಸ:ಮಜಲ್ ಹೌಸ್,ಶಾಂತಿಗೋಡು,ಪುತ್ತೂರು ತಾಲೂಕು ಇವರು ಸಲ್ಲಿಸಿರುವ ಭದ್ರತೆ ಜಾಮೀನು ಪತ್ರದಂತೆ ಅವರ ಜಮೀನನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮುಂದಿನ ಕಾನೂನು ಕ್ರಮ ಜರುಗಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 25–03–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀ ನಾರಾಯಣ ಆಳ್ವ, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು

ಪ್ರಾ.ಸಾ.–2: ಶ್ರೀ ಪಿ.ಪದ್ಮನಾಭ, ಅಬಕಾರಿ ರಕ್ಷಕ, ಪುತ್ತೂರು ವಲಯ, ಪುತ್ತೂರು

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಪ್ರಥಮ ಮಾಹಿತಿ ವರದಿ ಪ್ರತಿ

ನಿಶಾನೆ ಪಿ–2 : ಮಹಜರಿನ ಪ್ರತಿ.

ನಿಶಾನೆ ಪಿ–3 : ಸರ್ಚ್ ಮೆಮೊ

ನಿಶಾನೆ ಪಿ–4 : ರಾಸಾಯನಿಕ ವಿಶ್ಲೇಷಣಾ ವರದಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:–

–ಇಲ್ಲ–

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು**

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.810

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯ**

**ಸಂಖ್ಯೆ: 71ಎ:ವಾಮು:ಸಿಆರ್–207/2009–10, ದಿನಾಂಕ: –05–2010**

**ವಿಷಯ:** ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71 ಎ ಪ್ರಕಾರ ಸರ್ಕಾರದ ಪರ ಅಮಾನತ್ತುಪಡಿಸಿಕೊಳ್ಳಲಾದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಶಿವಮೊಗ್ಗ ಅರಣ್ಯ ವಿಭಾಗದ ವಿವಿಧ ವಲಯ ಅರಣ್ಯಾಧಿಕಾರಿಗಳು ಹಾಗೂ ಪೋಲಿಸ್ ಇಲಾಖೆಯವರು ಅರಣ್ಯೋತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ಅನುಸೂಚಿ ಯಲ್ಲಿ ನಮೂದಿಸಲಾಗಿರುವ ವಾಹನಗಳನ್ನು ಸೊತ್ತಿನೊಂದಿಗೆ ವಶಪಡಿಸಿಕೊಂಡು ಅರಣ್ಯ ಮೊಕದ್ದಮೆ ದಾಖಲಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71ಎ ನಿಯಮದ ಪ್ರಕಾರ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

**ಅನುಸೂಚಿ**

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ ಸಂಖ್ಯೆ ಮತ್ತು ವಲಯ | ವಾಹನದ ಮಾದರಿ ಮತ್ತು ನೊಂದಣಿ ಸಂಖ್ಯೆ | ಛಾಸಿಸ್ ನಂಬರ್ | ಇಂಜಿನ್ ನಂಬರ್ |
|---|---|---|---|---|
| 1 | 2 | 3 | 4 | 5 |
| 1) | ಪಿಎಸ್‌ಸಿಆರ್–66/02–03 ಶ್ರೀಗಂಧ, ರಿಪ್ಪನಪೇಟೆ ವಲಯ | ಅಂಬಾಸಿಡರ್ ಕಾರ್ ನಂ. ಎಂ.ಇ.ಜೆ–7300 | 14375510 | ಎಸ್.ವಿ–4010993 |
| 2) | ಪಿಎಸ್‌ಸಿಆರ್–82/02 ಶ್ರೀಗಂಧ ರಿಪ್ಪನಪೇಟೆ ವಲಯ | ಮಾರುತಿ–800 ಕಾರ್ ಕೆಎ–03 ಪಿ–1796 | 2087406 | 1516732 |

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ ಸಂಖ್ಯೆ ಮತ್ತು ವಲಯ | ವಾಹನದ ಮಾದರಿ ಮತ್ತು ನೊಂದಣಿ ಸಂಖ್ಯೆ | ಛಾಸಿಸ್ ನಂಬರ್ | ಇಂಜಿನ್ ನಂಬರ್ |
|---|---|---|---|---|
| 1 | 2 | 3 | 4 | 5 |
| 3) | ಪಿಎಸ್‌ಸಿಆರ್–91/02–03 ಶ್ರೀಗಂಧ ರಿಪ್ಪನಪೇಟೆ | ಮಾರುತಿ ವ್ಯಾನ್ ಕೆಎ–14 ಎಂ–935 | ಎಸ್ಐ–91 ಐಎನ್–733612 | 796 ಸಿಎಂ 93 |
| 4) | 150/04–05 ಸಾಗುವಾನಿ ಆಯನೂರು | ಲಾರಿ ಸಿ.ಎನ್.ಆರ್ 3494 | 344052232716 | 692 ಡಿಡಿ–22404 |
| 5) | 12/2005–06 ಸಾಗುವಾನಿ ಆಯನೂರು | ಟೈರು ಗಾಡಿ 2 ನಂ. | – | – |
| 6) | 37/05–06 ಶ್ರೀಗಂಧ ತೀರ್ಥಹಳ್ಳಿ | ಬಜಾಜ್ ಚೇತಕ್ ಸ್ಕೂಟರ್ ಕೆಎ–15 ಇ–2102 | ಸಿ–06 ಡಿಹೆಚ್ 397552 | ಇ–06 ಡಿಜೆ 416580 |
| 7) | 11/05–06 ಶ್ರೀಗಂಧ ಮಂಡಗದ್ದೆ | ಬಜಾಜ್ ಕ್ಯಾಲಿಬರ್ ಮೋಟಾರ್ ಬೈಕ್ ಕೆಎ–19 ಕೆ–3110 | ಡಿಡಿಎಫ್ ಬಿ.ಇ.ಎಲ್ 34740 | ಡಿ.ಡಿ.ಎಂ. ಬಿ.ಇ.ಎಲ್ 31972 |
| 8) | 54/2005–06 ಶ್ರೀಗಂಧ, ಆಯನೂರು | ಟಿ.ವಿ.ಎಸ್ ಸುಜುಕಿ ಮೋಟಾರ್ ಬೈಕ್ – ಕೆಎ–14 ಎಲ್–6919 | 1009 ಎಫ್–740412 | 1009 ಎಂ–792895 |
| 9) | 27/05–06 ಶ್ರೀಗಂಧ ಆಗುಂಬೆ ವಲಯ | ಯಮಹಾ ಮೋಟಾರ್ ಬೈಕ್ ಕೆಎ–18 ಕೆ–2069 | 02 ಹೆಚ್ 5 ಕೆಎ–14–9308 | 5 ಕೆಎ–149308 |
| 10) | 51/05–06 ಶ್ರೀಗಂಧ ತೀರ್ಥಹಳ್ಳಿ | ಬಜಾಜ್ ಎಂ–80 ಸ್ಕೂಟರ್ ಸಿ.ಆರ್.ಡಬ್ಲ್ಯೂ–375 | Not traceable | Not traceable |
| 11) | ಪಿಎಸ್‌ಸಿಆರ್–460/05–06 ಶ್ರೀಗಂಧ, ಶಂಕರ ವಲಯ ರೂರಲ್ ಪೋಲೀಸ್ ಶಿವಮೊಗ್ಗ | ಮಹೀಂದ್ರ ಜೀಪ್ ನಂ. ಕೆಎ–15 ಎಂ–17 | ಸಿ.ಜೆ–500 ಡಿಇ–2–ಡಿಎನ್–51479 | ಡಿ.ಎನ್ 51479 |
| 12) | 30/05–06 ಬೀಟೆ, ಶಂಕರ ವಲಯ | ಬಜಾಜ್ ಆಟೋ ರಿಕ್ಷಾ ಕೆಎ–30 –4043 | 22 ಸಿಇಹೆಚ್ 30985 | 22 ಇಬಿಇಹೆಚ್ 34463 |
| 13) | 88/05–06 ಶ್ರೀಗಂಧ ತೀರ್ಥಹಳ್ಳಿ | ಬಜಾಜ್ ಮೋಟಾರ್ ಬೈಕ್ 1) ಕೆಎ–15–ಇ–6388 2) ಸುಜುಕಿ ಮೋಟಾರ್ ಬೈಕ್ ಕೆಎ–14–ಇ–7851 | 1206 ಎಫ್ 333126 | 1206 ಎಂ 347161 |

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ ಸಂಖ್ಯೆ ಮತ್ತು ವಲಯ | ವಾಹನದ ಮಾದರಿ ಮತ್ತು ನೊಂದಣಿ ಸಂಖ್ಯೆ | ಛಾಸಿಸ್ ನಂಬರ್ | ಇಂಜಿನ್ ನಂಬರ್ |
|---|---|---|---|---|
| **1** | **2** | **3** | **4** | **5** |
| 14) | 10/06–07<br>ಶ್ರೀಗಂಧ<br>ಮಂಡಗದ್ದೆ | ಬಜಾಜ್ ಮೋಟಾರ್<br>ಬೈಕ್ ಕೆಎ–15<br>ಇ–8068 | 317ಬಿಡಿಜಿ 68337 | 31ಎಂ–3ಡಿ<br>ಜಿ–47514 |
| 15) | 13/06–07<br>ಶ್ರೀಗಂಧ<br>ಆಗುಂಬೆ | ಟಿ.ವಿ.ಎಸ್ ಸುಜುಕಿ<br>ಮೋಟಾರ್ ಬೈಕ್ ಕೆಎ–14<br>ಹೆಚ್–7209 | 15061–523879 | 1506–ಎಂ–567283 |
| 16) | 41/07–08<br>ಬೀಟೆ<br>ಶಂಕರ ವಲಯ | ಬಜಾಜ್ ಆಟೋ ರಿಕ್ಷಾ<br>ಕೆಎ–14–7778 | 22ಸಿಬಿಎಫ್ಎಫ್<br>78283 | 22–ಸಿಬಿಎಫ್ಎಫ್<br>82311 |
| 17) | 92/06–07<br>ಸಾಗುವಾನಿ<br>ಆಯನೂರು | ಒಂದು ಎತ್ತಿನ ಗಾಡಿ | – | – |
| 18) | 114/06–07<br>ಶ್ರೀಗಂಧ,<br>ತೀರ್ಥಹಳ್ಳಿ | ಸುಜುಕಿ<br>ಮೋಟಾರ್ ಬೈಕ್<br>ಮ್ಯಾಕ್ಸ್–100 ಕೆಎ–20<br>ಕೆ–2060 | 9001 ಎಫ್<br>524240 | 9001–ಎಂ<br>574989 |
| 19) | –ಡಿಟೋ– | ಯಮಹಾ ಮೋಟಾರ್<br>ಬೈಕ್ ಆರ್ಎಕ್ಸ್–100<br>ಕೆಎ–27<br>ಎಫ್–2573 | 1ಎಲ್1–346178 | 1ಎಲ್1–<br>346178 |
| 20) | 54/06–07<br>ಶ್ರೀಗಂಧ,<br>ತೀರ್ಥಹಳ್ಳಿ | ಆಟೋ ರಕ್ಷಾ ಕೆಎ–18 –<br>8170–ಎ/ಆರ್ ಕ್ಯಾಬ್ | ಎಫ್ಜಿಇ–250231 | ಆರ್–5–ಇ–100–304 |
| 21) | 114/07–08<br>ಬೀಟೆ<br>ತೀರ್ಥಹಳ್ಳಿ | ಯಮಹಾ ಮೋಟಾರ್<br>ಬೈಕ್ ಕೆಎ–20–ಕೆ–59 | 99ಕೆ4ಎಲ್ಎಸ್<br>033533 | 4ಎಲ್ಎಸ್<br>033533 |
| 22) | 16/07–08<br>ಸಾಗುವಾನಿ<br>ರಿಪ್ಪನಪೇಟೆ | ಹಿರೋ ಹೊಂಡಾ ಸಿ.ಡಿ<br>ಡಿಲಕ್ಸ್ ಮೋಟಾರ್ ಬೈಕ್<br>ರಿಜಿಸ್ಟ್ರೇಷನ್ ಇಲ್ಲ | 06ಎಲ್29ಎಫ್9<br>2017 | 06ಎಲ್ 29ಇ–0650 |
| 23) | 1/08–09<br>ವನ್ಯಜೀವಿ<br>ಮಂಡಗದ್ದೆ | ಟಿವಿಎಸ್ ವಿಕ್ಟಾರ್<br>ಮೋಟಾರ್ ಬೈಕ್ ಕೆಎ–14<br>ಎಸ್–6497 | ಎಂಡಿ–621 ಬಿಡಿ–<br>1452106871 | 0ಡಿಐಎಲ್–<br>51350362 |
| 24) | 02/08–09<br>ಬೀಟೆ<br>ಮಂಡಗದ್ದೆ | ಟಿ.ವಿ.ಎಸ್ ಸುಜುಕಿ<br>ಮ್ಯಾಕ್ಸ್–100 ಮೋಟಾರ್<br>ಬೈಕ್ ಕೆಎ–14–ಕೆ–355 | 1711 ಎಫ್<br>923721 | 1711 ಎಂ 970282 |

| ಕ್ರಮ ಸಂಖ್ಯೆ | ಅರಣ್ಯ ಮೊಕದ್ದಮೆ ಸಂಖ್ಯೆ ಮತ್ತು ವಲಯ | ವಾಹನದ ಮಾದರಿ ಮತ್ತು ನೊಂದಣಿ ಸಂಖ್ಯೆ | ಛಾಸಿಸ್ ನಂಬರ್ | ಇಂಜಿನ್ ನಂಬರ್ |
|---|---|---|---|---|
| 1 | 2 | 3 | 4 | 5 |
| 25) | 13/08–09<br>ಬೀಟೆ<br>ಶಂಕರ ವಲಯ | ಸ್ಕೂಟರ್ ಕೆಎ–15 7445 | 35 ಸಿ–ಬಿಡಿಎ 3096 | 35 ಇ–ಬಿಡಿಎ 80104 |
| 26) | 11/09–10<br>ಸಾಗುವಾನಿ<br>ಮಂಡಗದ್ದೆ | ಒಂದು ಎತ್ತಿನ ಗಾಡಿ | – | – |
| 27) | 140/89–90<br>ಶ್ರೀಗಂಧ<br>ಆಯನೂರು | ಅಂಬಾಸಿಡರ್ ಕಾರ್<br>ಎಂಇಯು–4738 | – | ಟಿ.ನಂ. 565394 |
| 28) | 53/2009–10<br>ಸಾಗುವಾನಿ<br>ಆಯನೂರು | ಕಬ್ಬಿಣದ ಎತ್ತಿನ<br>ಗಾಡಿ (1) | – | – |
| 29) | 16/09–10<br>ಬೀಟೆ<br>ರಿಪ್ಪನ್‌ಪೇಟೆ | 1) ಮೋಟಾರ್ ಬೈಕ್<br>ಕೆಎ–14–ಜೆ 4451<br>2) ಮೋಟಾರ್ ಬೈಕ್<br>ಕೆಎ–15–ಇ–8542 | 1612–ಎಂ–783649<br><br>1802–ಎಂ–14603 | 1612–ಎಫ್–737624<br><br>1802–ಎಫ್–69181 |
| 30) | 42/09–10<br>ಬೀಟೆ<br>ರಿಪ್ಪನ್‌ಪೇಟೆ | ಮಾರಿತಿ ಓಮ್ನಿ ವ್ಯಾನ್<br>ಕೆ ಎ–14–ಎಂ–3116 | ಎಫ್8–ಬಿಐಎನ್–<br>1781339 | ಕೆಎ–14–ಎಸ್ಎಂಜಿ–<br>1034 |
| 31) | 71/2009–10<br>ಸಾಗುವಾನಿ<br>ಬೀಟೆ: 03=0.121ಎಂ3<br>ಆಯನೂರು | ಮಾರಿತಿ ಓಮ್ನಿ ವ್ಯಾನ್<br>ಕೆ ಎ–14–ಎಂ–1752 | ಎಫ್8–ಬಿಐಎನ್–<br>1115845 | ಎಸ್ಬಿ 91 ಐಎನ್<br>106363 |

ಮೇಲ್ಕಂಡ ವಾಹನಗಳ ಮತ್ತು ಸೊತ್ತಿನ ನಿಜವಾದ ಮಾಲೀಕರು, ವಾರಸುದಾರರು ಯಾರಾದರೂ ಇದ್ದಲ್ಲಿ, ಅಂತಹವರು ವಾಹನದ ಮತ್ತು ಸೊತ್ತಿನ ಮಾಲೀಕತ್ವದ ದಾಖಲೆಗಳೊಂದಿಗೆ ಈ ಪ್ರಕಟಣೆ ಪ್ರಕಟಗೊಂಡ ಹದಿನೈದು (15) ದಿನಗಳೊಳಗಾಗಿ ಕೆಳಕಂಡ ಪ್ರಾಧಿಕಾರದೆದುರು ಹಾಜರಾಗಿ ತಮ್ಮ ಹಕ್ಕು ಬಾದ್ಯತೆಗಳನ್ನು ರುಜುವಾತುಪಡಿಸಬೇಕು. ಹಾಗೂ ಈ ವಾಹನಗಳ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅವರ ವಾಹನವು ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಪ್ರಕಾರ ರುಜುವಾತು ಪಡಿಸಬೇಕು. ನಿಗದಿತ ಅವಧಿಯಲ್ಲಿ ಅಹವಾಲು ಇಲ್ಲವಾದ್ದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71ಎ ನಿಯಮ ಹಾಗೂ ತಿದ್ದುಪಡಿಯಾದ ಕಲಂನಡಿ ಮೇಲ್ಕಂಡ ವಾಹನಗಳನ್ನು ಮತ್ತು ಸೊತ್ತನ್ನು ಈ ಪ್ರಕಟಣೆಯೇ ಅಂತಿಮ ನೋಟೀಸು ಎಂದು ಪರಿಗಣಿಸಿ, ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**

ಪಿ.ಆರ್.867

ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಗ್ರಾಅಪ 89 ಉಖಾಯೋ 2010, ಬೆಂಗಳೂರು ದಿನಾಂಕ:21ನೇ ಮೇ, 2010**

**ವಿಷಯ:** ಸಾರ್ವಜನಿಕ/ಸಂಘ ಸಂಸ್ಥೆಗಳಿಂದ ಸರ್ಕಾರದ ಮಟ್ಟದಲ್ಲಿ ಸ್ವೀಕೃತವಾಗುವ ದೂರುಗಳ ತನಿಖೆಗೆ ರಾಜ್ಯ ಮಟ್ಟದಲ್ಲಿ ಸ್ಕ್ವಾಡ್ (Squad) ರಚಿಸುವ ಬಗ್ಗೆ.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ ಗ್ರಾಅಪ: 116 ಉಖಾಯೋ 07, ಬೆಂಗಳೂರು, ದಿನಾಂಕ 13ನೇ ಮಾರ್ಚ್ 2009

ಕರ್ನಾಟಕ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ (ಕುಂದು ಕೊರತೆ ನಿವಾರಣೆ ನಿಯಮಗಳು 2009 ನ್ನು ಹೊರಡಿಸಿದ್ದು, ನಿಯಮ (3)ರಲ್ಲಿ ತಿಳಿಸಿರುವಂತೆ ಕ್ಷೇತ್ರ ಮಟ್ಟದಲ್ಲಿ ಕಾರ್ಯಕ್ರಮ ಅಧಿಕಾರಿ (PO) ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳು (DPC) ಕುಂದುಕೊರತೆ ನಿವಾರಣಾ ಅಧಿಕಾರಿ (GRO) ಗಳಾಗಿರುತ್ತಾರೆ. ದೂರು/ಕುಂದು ಕೊರತೆಗಳ ನಿವಾರಣೆಗೆ ಇವರು ಕಾಲಮಿತಿಯಲ್ಲಿ ಕ್ರಮವಹಿಸಬೇಕಾಗಿರುತ್ತದೆ. ನಿಯಮ (9)ರ ಪ್ರಕಾರ ದೂರುಗಳ ವಿಲೆಯ ಮೇಲ್ವಿಚಾರಣೆಗೆ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯು ಕಾರ್ಯನಿರ್ವಹಿಸುತ್ತಿದೆ. ಈ ಎಲ್ಲಾ ವ್ಯವಸ್ಥೆ ಅಸ್ಥಿತ್ವದಲ್ಲಿದ್ದರೂ ಸಹ ರಾಜ್ಯದ ನಾನಾ ಭಾಗಗಳಿಂದ ಸರ್ಕಾರಕ್ಕೆ ನೇರವಾಗಿ ಅನೇಕ ದೂರುಗಳು ದಾಖಲಾಗುತ್ತಿವೆ. ಇವುಗಳ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಮತ್ತು ಸಕಾಲದಲ್ಲಿ ವಿಲೇವಾರಿ ಮಾಡಲು ಸಂಬಂಧಪಟ್ಟ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳಿಗೆ ಕಳುಹಿಸಿಕೊಡಲಾಗುತ್ತಿದೆ. ಸದರಿಯವರು ದೂರುಗಳನ್ನು ಪರಿಶೀಲಿಸಿ ಅಗತ್ಯವಿದ್ದಲ್ಲಿ ಸೂಕ್ತಕ್ರಮ ಜರುಗಿಸಿ ಇವುಗಳ ವಿಲೆಗೆ ಕ್ರಮವಹಿಸುತ್ತಿದ್ದಾರೆ.

ಈ ಪೈಕಿ ತೀವ್ರತರ ಆರೋಪಗಳು ಇರುವಂತಹ ದೂರುಗಳನ್ನು ರಾಜ್ಯಮಟ್ಟದ ತನಿಖಾ ತಂಡದಿಂದ ಸ್ವತಂತ್ರವಾಗಿ ತನಿಖೆ ಮಾಡಲು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ನಿರ್ದೇಶಕರ ನೇರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುವಂತೆ ರಾಜ್ಯ ಮಟ್ಟದ ಸ್ಕ್ವಾಡ್ ರಚಿಸುವುದು ಅವಶ್ಯಕವೆಂದು ಸರ್ಕಾರವು ಅಭಿಪ್ರಾಯಪಟ್ಟಿದೆ. ಅದರಂತೆ ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡ ರಾಜ್ಯ ಮಟ್ಟದ ಸ್ಕ್ವಾಡ್ ರಚಿಸಿ ಆದೇಶಿಸಿದೆ.

1) ಜಂಟಿ ನಿರ್ದೇಶಕರು (ರಾ.ಗ್ರಾ.ಉ.ಖಾ.ಯೋ)

2) ಸಹಾಯಕ ನಿರ್ದೇಶಕರು

3) ಲೆಕ್ಕಾ ಪರಿಶೋಧನಾಧಿಕಾರಿ

ತನಿಖೆ ಕಾರ್ಯದಲ್ಲಿ ತಾಂತ್ರಿಕ ಪರಿಣತರ ಸೇವೆ ಅವಶ್ಯಕವೆಂದು ಕಂಡುಬಂದಲ್ಲಿ ಸಂಬಂಧಪಟ್ಟ ಜಿಲ್ಲೆಯ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಪಿ.ಎಂ.ಜಿ.ಎಸ್.ವೈ. ವಿಭಾಗದ ಕಾರ್ಯಪಾಲಕ ಅಭಿಯಂತರರ ಸೇವೆ ಪಡೆಯುವುದು. ಸ್ಕ್ವಾಡ್ ಪ್ರವಾಸಕ್ಕೆ ಒಂದು ವಾಹನವನ್ನು ಹೊರಗುತ್ತಿಗೆಯ ಮೂಲಕ ಬಾಡಿಗೆ ಪಡೆಯಲು ಮತ್ತು ವೆಚ್ಚವನ್ನು ಯೋಜನೆಯ ಆಡಳಿತಾತ್ಮಕ ವೆಚ್ಚದಿಂದ ಭರಿಸಲು ಒಪ್ಪಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ರವಿಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ದಿ & ಪಂಚಾಯತ್ ರಾಜ್ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಗ್ರಾಅಪ 89 ಉಖಾಯೋ 2010, ಬೆಂಗಳೂರು ದಿನಾಂಕ:21ನೇ ಮೇ, 2010**

**ವಿಷಯ:** ಸಾರ್ವಜನಿಕ/ಸಂಘ ಸಂಸ್ಥೆಗಳಿಂದ ಸರ್ಕಾರದ ಮಟ್ಟದಲ್ಲಿ ಸ್ವೀಕೃತವಾಗುವ ದೂರುಗಳ ತನಿಖೆಗೆ ರಾಜ್ಯ ಮಟ್ಟದಲ್ಲಿ ಸ್ಕ್ವಾಡ್ (Squad) ರಚಿಸುವ ಬಗ್ಗೆ.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ ಗ್ರಾಅಪ: 116 ಉಖಾಯೋ 07, ಬೆಂಗಳೂರು, ದಿನಾಂಕ:13ನೇ ಮಾರ್ಚ್ 2009.

ಕರ್ನಾಟಕ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ (ಕುಂದು ಕೊರತೆ ನಿವಾರಣೆ ನಿಯಮಗಳು 2009 ನ್ನು ಹೊರಡಿಸಿದ್ದು, ನಿಯಮ (3)ರಲ್ಲಿ ತಿಳಿಸಿರುವಂತೆ ಕ್ಷೇತ್ರ ಮಟ್ಟದಲ್ಲಿ ಕಾರ್ಯಕ್ರಮ ಅಧಿಕಾರಿ (PO) ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳು (DPC) ಕುಂದುಕೊರತೆ ನಿವಾರಣಾ ಅಧಿಕಾರಿ (GRO) ಗಳಾಗಿರುತ್ತಾರೆ.

ನಿಯಮ (6)ರಲ್ಲಿ ದೂರು ವಿಲೆಗೆ ಕಾಲಮಿತಿ ವಿಧಿಸಲಾಗಿದೆ. ನಿಯಮ (7)ರಲ್ಲಿ ದೂರು ವಿಲೆಗೆ ಅಧಿಕಾರಿಗಳ ಜವಾಬ್ದಾರಿಯನ್ನು ಕೂಡ ನಿಗದಿಪಡಿಸಲಾಗಿದೆ, ಹಾಗೂ ಲೋಪಗಳು ಕಂಡು ಬಂದರೆ ದಂಡವಿಧಿಸಲು ಸಹ ಅವಕಾಶ ಮಾಡಲಾಗಿದೆ.

ಆದರೂ ಸಹ ದಿನೇ ದಿನೇ ದೂರುಗಳ ಸಂಖ್ಯೆ ಹೆಚ್ಚುತ್ತಿದ್ದು, ವಿಲೇವಾರಿ ಸಹ ಕುಂಠಿತಗೊಂಡಿರುತ್ತದೆ. ಅಲ್ಲದೇ ಕಾರ್ಯಕ್ರಮ ಅಧಿಕಾರಿ ಹಂತದಲ್ಲಿ ಮತ್ತು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳ ಹಂತದಲ್ಲಿ ಇಂತಹ ದೂರುಗಳನ್ನು ಪರಿಣಾಮಕಾರಿಯಾಗಿ ಬಗೆಹರಿಸದ ಕಾರಣ ರಾಜ್ಯ ಮತ್ತು ಕೇಂದ್ರ ಮಟ್ಟಕ್ಕೂ ಹೆಚ್ಚಿನ ದೂರುಗಳು ದಾಖಲಾಗುತ್ತಿವೆ. ಸಾರ್ವಜನಿಕರು/ಸಂಘ-ಸಂಸ್ಥೆಗಳು ಕೂಲಿಕಾರರು ಮತ್ತು ಜನಪ್ರತಿನಿಧಿಗಳಿಂದ ಈ ನಿರ್ದೇಶನಾಲಯಕ್ಕೆ ನೀಡಿರುವ ದೂರುಗಳನ್ನು ಪರಿಶೀಲಿಸಿ ಲೋಪಗಳನ್ನು ಸರಿಪಡಿಸಿ ಅರ್ಜಿದಾರರಿಗೆ ತೆಗೆದುಕೊಂಡ ಕ್ರಮದ ಬಗ್ಗೆ ಹಿಂಬರಹ ನೀಡಿ ನಿರ್ದೇಶನಾಲಯಕ್ಕೆ ವರದಿ ನೀಡುವಂತೆ ತಿಳಿಸಿ ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಬಹುತೇಕ ದೂರು ಅರ್ಜಿಗಳನ್ನು ಕಳುಹಿಸಲಾಗಿದೆ. ಆದರೆ ಬಹಳಷ್ಟು ದೂರುಗಳು ವಿಲೇ ಆಗದೇ ಹಾಗೆಯೇ ಬಾಕಿ ಉಳಿದಿರುವುದರಿಂದ ಪುನ: ಪುನ: ಅದೇ ದೂರುಗಳು ಬರುತ್ತಿವೆ. ಆದ್ದರಿಂದ ಇಂತಹ ದೂರುಗಳನ್ನು ಪರಿಶೀಲಿಸಿ ತ್ವರಿತಗತಿಯಲ್ಲಿ ವಿಲೇ ಮಾಡುವಲ್ಲಿ ಕಾರ್ಯಕ್ರಮ ಅಧಿಕಾರಿಗಳಿಗೆ ಹಾಗೂ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳ ತನಿಖೆ ಕಾರ್ಯಕ್ರಮದಲ್ಲಿ ಹೆಚ್ಚಿನ ನೆರವು ನೀಡುವ ಹಿತದೃಷ್ಟಿಯಿಂದ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳ ನೇರ ನಿಯಂತ್ರಣದಲ್ಲಿ ಒಂದು ಸ್ಕ್ವಾಡ್ ರಚಿಸುವುದು ಸೂಕ್ತವೆಂದು ಸರ್ಕಾರವು ಅಭಿಪ್ರಾಯಪಟ್ಟಿದೆ. ಈ ಸ್ಕ್ವಾಡ್‌ನಲ್ಲಿ ಈ ಕೆಳಕಂಡ ಸಿಬ್ಬಂದಿ ಇರತಕ್ಕದ್ದು.

1) ಜಿಲ್ಲಾಧಿಕಾರಿಯವರು / ಮುಖ್ಯ ಕಾರ್ಯನಿರ್ವಹಣಾಧಿಕಾರಿ ಸೂಕ್ತವೆಂದು ಅಭಿಪ್ರಾಯ ಪಡುವ ಒಬ್ಬ ಜಿಲ್ಲಾ ಮಟ್ಟದ ಹಿರಿಯ ಅಧಿಕಾರಿ.
2) ಕಾರ್ಯಪಾಲಕ ಅಭಿಯಂತರರು, ಪಿ.ಎಂ.ಜಿ.ಎಸ್.ವೈ.
3) ಜಂಟಿ ನಿರ್ದೇಶಕರು, ಕೃಷಿ ಇಲಾಖೆ
4) ಜಿಲ್ಲಾ ಪಂಚಾಯಿತಿಯ ಒಬ್ಬ ಹಿರಿಯ ಲೆಕ್ಕಾಧಿಕಾರಿ
5) ಜಿಲ್ಲಾ ಎಂಐಎಸ್ ನೋಡೆಲ್ ಅಧಿಕಾರಿ

ಈ ಸ್ಕ್ವಾಡ್ ಪ್ರವಾಸಕ್ಕೆ ಒಂದು ವಾಹನವನ್ನು ಹೊರಗುತ್ತಿಗೆಯ ಮೂಲಕ ಬಾಡಿಗೆ ಪಡೆಯಲು ಮತ್ತು ವೆಚ್ಚವನ್ನು ಯೋಜನೆಯ ಆಡಳಿತಾತ್ಮಕ ವೆಚ್ಚದಿಂದ ಭರಿಸಲು ಅನುಮೋದನೆ ನೀಡಿದೆ. ಮೇಲೆ ಹೇಳಿದ ಸದಸ್ಯರುಗಳನ್ನೊಳಗೊಂಡ ಸ್ಕ್ವಾಡ್‌ನ್ನು ಒಂದು ವಾರದೊಳಗಾಗಿ ರಚಿಸಿ, ಅದರ ವಿವರವನ್ನು ಸರ್ಕಾರಕ್ಕೆ ವರದಿ ಮಾಡುವುದು. ಜಿಲ್ಲೆಯಲ್ಲಿ ಬಾಕಿ ಇರುವ ಹಾಗೂ ಜಿಲ್ಲೆಯಲ್ಲಿ Toll Free ಕರೆಗಳ ಮೂಲಕ ಬರುವ ಮತ್ತು MIS ಮೂಲಕ ಸ್ವೀಕೃತವಾಗುವ ತೀವ್ರ ತರವಾದ ಹಾಗೂ ಗಂಭೀರ ಆರೋಪಗಳನ್ನು ಒಳಗೊಂಡ ದೂರು/ಕುಂದು ಕೊರತೆ ಅರ್ಜಿಗಳನ್ನು ವಿಲೇ ಮಾಡುವ ಕಾರ್ಯದಲ್ಲಿ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಈ ಸ್ಕ್ವಾಡ್ ಸಹಕಾರ ಪಡೆಯುವುದು.

ಆಯಾ ಜಿಲ್ಲೆಗೆ ಸಂಬಂಧಿಸಿದಂತೆ ಈಗಾಗಲೇ ನಿರ್ದೇಶನಾಲಯದಿಂದ ಕಳುಹಿಸಿರುವ ದೂರು ಅರ್ಜಿಗಳು ಹಾಗೂ ಎಂ.ಐ.ಎಸ್.ನಲ್ಲಿ ದಾಖಲಾಗಿರುವ ದೂರುಗಳನ್ನು ಮೊದಲ ಆದ್ಯತೆ ಮೇಲೆ ವಿಲೇ ಮಾಡಲು ಕೂಡಲೇ ಕ್ರಮ ಕೈಗೊಳ್ಳುವುದು. ಹಾಗೂ ಪ್ರತಿಯೊಂದು ದೂರಿನ ಮೇಲೆ ಕೈಗೊಂಡ ಕ್ರಮದ ವರದಿಯನ್ನು ತಪ್ಪದೆ ಈ ನಿರ್ದೇಶನಾಲಯಕ್ಕೆ ಸಲ್ಲಿಸಿ, ದೂರು ಮುಕ್ತಾಯಗೊಳಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ರವಿಕುಮಾರ್**

ಪಿ.ಆರ್.870

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ & ಪಂಚಾಯತ್ ರಾಜ್ ಇಲಾಖೆ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ಹೊಸಕೋಟೆ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಮೆ:ಜೆ.ಕೆ. ಸ್ಟೋನ್ಸ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:748ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.3,43,576/-ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/748/08–09/5014, ದಿನಾಂಕ:09.02.2009.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರ ಸಂಖ್ಯೆ:...../ಗಭೂಇ/ಡಿಸಿಬಿ/ಕಗಗು/748/09–10, ದಿನಾಂಕ:08.09.2009.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ಹೊಸಕೋಟೆ ಗ್ರಾಮದ ಸರ್ವೆ ನಂ.86ರಲ್ಲಿ ಮೆ: ಜೆ.ಕೆ. ಸ್ಟೋನ್ಸ್ ರವರಿಗೆ 4.00 ಎಕರೆಗೆ ದಿನಾಂಕ:09.12.2005 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:748ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/748/ 08–09/5014, ದಿನಾಂಕ:09.02.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,92,588/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರೀಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಹಾಸನ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸು ಪತ್ರಕ್ಕೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮದ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ.94 ದಿನಾಂಕ:02–07–1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:748ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು 748/2009–10 ದಿನಾಂಕ:17ನೇ ಫೆಬ್ರವರಿ, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ಹೊಸಕೋಟೆ ಗ್ರಾಮದ ಸರ್ವೆ ನಂ.86ರಲ್ಲಿ 4.00 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿಗುತ್ತಿಗೆ ಸಂಖ್ಯೆ:748ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಲ್ಲು ಗಣಿಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿಆರ್–323 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಹಳಿಯೂರು ಗ್ರಾಮದ ಸರ್ವೆ ನಂ.68/2ರಲ್ಲಿ 2–00 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ಶ್ರೀ ಕೆ.ಎಸ್. ನಾಗೇಶ್‌ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:756ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ: ಸಿಐ53 ಎಂಎಂಎನ್ 2010 ಬೆಂಗಳೂರು, ದಿನಾಂಕ:16.02.2010.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಹಳಿಯೂರು ಗ್ರಾಮದ ಸರ್ವೆ ನಂ.68/2ರಲ್ಲಿ 2–00 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:756ರ ಗುತ್ತಿಗೆಯನ್ನು ಶ್ರೀ ಕೆ.ಎಸ್. ನಾಗೇಶ್ ರವರ ಹೆಸರಿನಲ್ಲಿ ದಿನಾಂಕ:06.02.2006 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರೀಯಗೊಳಿಸಿದ ಕಾರಣ ದಿನಾಂಕ:21.01.2010 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು/756/2009–10 ದಿನಾಂಕ:9ನೇ ಮಾರ್ಚ್, 2010**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಸರ್ಕಾರದ ಪತ್ರದಲ್ಲಿ ನಿರ್ದೇಶಿಸಿರುವಂತೆ ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಹಳಿಯೂರು ಗ್ರಾಮದ ಸರ್ವೆ ನಂ.68/2ರಲ್ಲಿ 2–00 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಅಲಂಕಾರಿಕ ಶಿಲೆಗಾಗಿ ಶ್ರೀ ಕೆ.ಎಸ್. ನಾಗೇಶ್ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:756ನ್ನು ರದ್ದುಗೊಳಿಸಿದ ದಿನಾಂಕ:21.01.2010 ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲುಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿಆರ್–458 ನಿರ್ದೇಶಕರು

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No.DMG:1000/AML/06/5409, Dated:19th March, 2010**

**Sub:** Consideration of application filed by Sri S.P. Vijaya Kumar for grant of ML on 13.10.2006 over an area of 31.00 acres for Iron ore & Manganese Minerals, in Deogiri Village Sandur Taluk Bellary District-reg.

**Ref:** 1) Mining lease application No.1000/AML/06 Dated:13.10.2006.

2) This office notice No.DMG:1000/AML/06/07-08/5764, Dated:14.08.2007.

**PREAMBLE:**

The applications filed by you on 13.10.2006 vide Ref No.1 for sanction of Iron ore minerals in Deogiri village Sandur Taluk Bellary district was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 14.08.2007 vide Ref No.(2), as why your application should not be rejected for the above mentioned reasons and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M.E. Shivalinga Murthy, IAS, the Director of Mines and Geology, Bangalore, in exercise of powers delegated under Government No.CI 03 MMM 95 Dated 27-05-1995 do hereby reject the application for grant of ML in favour of Sri S.P. Vijaya Kumar For the reasons stated above.

PR-439 DIRECTOR

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಬಂಡಹಳ್ಳಿ ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಶ್ರೀಮತಿ ಓ.ವಿ. ನಿರ್ಮಲಾದೇವಿ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:719ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,98,428/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/719/08–09/ 5773, ದಿನಾಂಕ:03.03.2009.

2) ಹಿರಿಯ ಭೂವಿಜ್ಞಾನಿ, ಕೋಲಾರ ರವರ ಪತ್ರಸಂಖ್ಯೆ:3692/ಗಭೂಇ/ಡಿಸಿಬಿ/ಕಗಗು/719/09–10, ದಿನಾಂಕ:18.09.2009.

**ಪ್ರಸ್ಥಾವನೆ:**

ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಬಂಡಹಳ್ಳಿ ಗ್ರಾಮದ ಸರ್ವೆ ನಂ.57ರಲ್ಲಿ ಶ್ರೀಮತಿ ಓ.ವಿ.ನಿರ್ಮಲಾದೇವಿ ರವರಿಗೆ 2–20 ಎಕರೆಗೆ ದಿನಾಂಕ:01.07.2005 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:719ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ/ಡಿಸಿಬಿ/ಕಗಗು/719/5773/08–09, ದಿನಾಂಕ:03.03.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2008 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,20,356/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರೀಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಕೋಲಾರ ರವರು ವರದಿ ಮಾಡಿರುತ್ತಾರೆ. 2008–09ನೇ ಸಾಲಿನಲ್ಲಿ ಸದರಿಯವರು ರೂ.1,98,428/– ಗಳನ್ನು ಪಾವತಿಸಬೇಕಾಗಿರುತ್ತದೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:719ನ್ನು ನಿಯಮಾನುಸಾರ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು/719/09–10 ದಿನಾಂಕ:10ನೇ ಮಾರ್ಚ್, 2010**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೋಲಾರ ಜಿಲ್ಲೆ, ಮುಳಬಾಗಿಲು ತಾಲ್ಲೂಕು, ಬಂಡಹಳ್ಳಿ ಗ್ರಾಮದ ಸರ್ವೆ ನಂ.57ರಲ್ಲಿ 2–20 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:719ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿಆರ್–459 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ॥ ಚೆನ್ನಕೇಶವ ಎಕ್ಸ್‌ಪೋರ್ಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:608ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.348368/–ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಊ.ಖ.ರಿ.ನಿ.94ರ ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/608/08–09/ 4195, ದಿನಾಂಕ:01.01.2009.

2) ಹಿರಿಯ ಭೂವಿಜ್ಞಾನಿ, ಕೋಲಾರ ರವರ ಪತ್ರಸಂಖ್ಯೆ:4195/ಗಭೂಇ/ಡಿಸಿಬಿ/ಕಗಗು/608/09–10, ದಿನಾಂಕ:01.01.2009.

**ಪ್ರಸ್ಥಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.167ರಲ್ಲಿ ಮೆ॥ ಚೆನ್ನಕೇಶವ ಎಕ್ಸ್‌ಪೋರ್ಟ್ಸ್ ರವರಿಗೆ 2–20 ಎಕರೆಗೆ ದಿನಾಂಕ:05.12.2003 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:608ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ/ಡಿಸಿಬಿ/ಕಗಗು/608/4195/08–09, ದಿನಾಂಕ:01.01.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2009 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.2,48,577/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ

ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯು ನಿಷ್ಕ್ರೀಯವಾಗಿರುವುದಾಗಿ ಉಪ ನಿರ್ದೇಶಕರು, ರಾಮನಗರ ರವರು ವರದಿ ಮಾಡಿರುತ್ತಾರೆ. 2008–09ನೇ ಸಾಲಿನಲ್ಲಿ ಸದರಿಯವರು ರೂ.348368/– ಗಳನ್ನು ಪಾವತಿಸಬೇಕಾಗಿರುತ್ತದೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:608ನ್ನು ನಿಯಮಾನುಸಾರ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು/608/09–10/17558, ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.167ರಲ್ಲಿ 2–20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:608ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿಆರ್–460 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಮಾಗೋಡು ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ಶ್ರೀ ಎಂ.ಎಸ್. ರವೀಂದ್ರ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:631ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.265130/– ನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ಅಂತಿಮ ನೋಟೀಸ್ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/631/08–09/5010, ದಿನಾಂಕ:09.02.2009.

2) ಹಿರಿಯ ಭೂವಿಜ್ಞಾನಿ, ಹಾಸನ ರವರ ಪತ್ರಸಂಖ್ಯೆ:2449/ಗಭೂಇ/ಡಿಸಿಬಿ/ಕಗಗು/631/09–10, ದಿನಾಂಕ:08.09.2009.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಮಾಗೋಡು ಗ್ರಾಮದ ಸರ್ವೆ ನಂ.17ರಲ್ಲಿ ಶ್ರೀ ಎಂ.ಎಸ್. ರವೀಂದ್ರ ರವರಿಗೆ 3–00 ಎಕರೆಗೆ ದಿನಾಂಕ:03.03.2004 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ:631ನ್ನು ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ:ಗಭೂಇ/ಡಿಸಿಬಿ/ಕಗಗು/631/5010/08–09/ ದಿನಾಂಕ:09.02.2009ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2009 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,41,807/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ನೋಟೀಸ್ ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂವಿಜ್ಞಾನಿ, ಹಾಸನ ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಡಿ ಸರ್ಕಾರದ ಅಧಿಸೂಚನೆ–III ಸಂಖ್ಯೆ:ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:631ನ್ನು ನಿಯಮಾನುಸಾರ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ:ಗಭೂಇ/ಡಿಸಿಬಿ/ಕಗಗು/631/2009–10 ದಿನಾಂಕ:11ನೇ ಮಾರ್ಚ್, 2010**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮ 1994ರ ನಿಯಮ ಗಣಿ ಮತ್ತು ಭೂವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಮಾಗೋಡು ಗ್ರಾಮದ ಸರ್ವೆ ನಂ.17ರಲ್ಲಿ 3–00 ಎಕರೆಗೆ ಕಪ್ಪುಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:631ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ಧುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿಆರ್–461 ನಿರ್ದೇಶಕರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.41ರಲ್ಲಿ 2.30 ಎಕರೆ ಮಲ್ಟಿಕಲರ್ ಗ್ರಾನೈಟ್ ಶಿಲೆಗಾಗಿ ಶ್ರೀಮತಿ ಗಿರಿಜಾರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:337ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ: ಸಿಐ 12 ಎಂ.ಆರ್.ಸಿ.2007, ಬೆಂಗಳೂರು, ದಿನಾಂಕ:06.10.2009 ಮತ್ತು 01.03.2010.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.41ರಲ್ಲಿ 2.30 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಗ್ರಾನೈಟ್‌ಕಲ್ಲು ಗಣಿ ಗುತ್ತಿಗೆ ಸಂಖ್ಯೆ:337ರ ಗುತ್ತಿಗೆಯನ್ನು ಶ್ರೀಮತಿ ಗಿರಿಜಾ ರವರ ಹೆಸರಿನಲ್ಲಿ ದಿನಾಂಕ:24.05.2008 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರೀಯಗೊಳಿಸಿದ ಕಾರಣ ದಿನಾಂಕ:21.10.2002 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ:ಗಭೂಇ/ಕಗಗು/337/2009–10/18893, ದಿನಾಂಕ:24ನೇ ಮಾರ್ಚ್, 2010**

ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ನಿರ್ದೇಶಕರಿಗೆ ಸರ್ಕಾರದ ಪತ್ರದಲ್ಲಿ ನಿರ್ದೇಶಿಸಿರುವಂತೆ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ.41ರಲ್ಲಿ 2.30 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:337ರ ಗುತ್ತಿಗೆಯನ್ನು ಶ್ರೀಮತಿ ಗಿರಿಜಾ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:337ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ:21.10.2002 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲುಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿಆರ್–499 ನಿರ್ದೇಶಕರು

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No.DMG:1005/AML/08/5589, Dated:24th March, 2010**

**Sub:** Consideration of application filed by Sri Rajuvithal Rao for grant of ML on 21.06.2008 over an area of 599.00 Hectares for Iron ore & Manganese Minerals, in Gongagandanahalli Village Chennagiri Taluk Davanagere District-reg.

**Ref:** 1) Mining lease application No.1005/AML/08 Dated:21.06.2008.

2) This office notice No.DMG:1005/AML/08/12266, Dated:05.01.2009.

**PREAMBLE:**

The applications filed by you on 21.06.2008 vide Ref No.1 for sanction of Iron ore & Manganese minerals in Gongagandanahalli Village Chennagiri Taluk Davanagere District was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 05.01.2009 vide Ref No.(2), as why your application should not be rejected for the above mentioned reasons and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M.E. Shivalinga Murthy, IAS, Director of Mines and Geology, Bangalore, in exercise of powers delegated under Government No.CI 03 MMM 95 Dated:27-05-1995 do hereby reject the application for grant of ML in favour of Sri Rajuvithal Rao For the reasons stated above.

PR-510 DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No.DMG:156/APL/94/2010-11/1388, Dated:23rd April, 2010**

**Sub:** Consideration of application filed by Sri K.H. Parameshappa for grant of PL on 09.05.1994 over an area of 60.00acres for White Quartz Minerals in Ingalagi & Kariganuru Village, Hospet Taluk, Bellary District-reg.

**Ref:** 1) Mining lease application No.156/APL/94 Dated:09.05.1994.

2) This office notice No.DMG:156/APL/94/8562, Dated:22.01.1998

**PREAMBLE:**

The applications filed by you on 09.05.1994 vide Ref No.1 for sanction of White Quartz Minerals in Ingalagi & Kariganuru Village, Hospet Taluk, Bellary District was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 22.01.1998 vide Ref No.(2), as why your application should not be rejected for the above mentioned reasons and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M.E. Shivalinga Murthy, IAS, the Director of Mines and Geology, Bangalore, in exercise of powers delegated under Government No.CI 03 MMM 95 Dated:27-05-1995 do hereby reject the application for grant of PL in favour of Sri K.H. Parameshappa For the reasons stated above.

DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No.DMG:4/APL/95/2010-11/1355, Dated:23rd April, 2010**

**Sub:** Consideration of application filed by M/s Srilakashmi Minerals for grant of PL on 18.01.1995 over an area of 180.00 acres for Iron Ore Minerals in NEB Range Village, Hospet Taluk, Bellary District-reg.

**Ref:** 1) Mining lease application No.4/APL/95 Dated:18.01.1995.

2) This office notice No.DMG:4/APL/95/8191, Dated:09.01.1998

**PREAMBLE:**

The applications filed by you on 18.01.1995 vide Ref No.1 for sanction of Iron Ore Minerals in NEB Range Village, Hospet Taluk, Bellary District was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 09.01.1998 vide Ref No.(2), as why your application should not be rejected for the above mentioned reasons and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M.E. Shivalinga Murthy, IAS, the Director of Mines and Geology, Bangalore, in exercise of powers delegated under Government No.CI 03 MMM 95 Dated:27-05-1995 do hereby reject the application for grant of PL in favour of M/s Srilakashmi Minerals For the reasons stated above.

DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No. DMG: 130/AML02/2009-10/1349, Dated:23rd April, 2010**

**Sub:** Consideration of application filed by M/s. Jindal Vijayanagar Steel Ltd., Minerals for grant of ML on 24.10.2002 over an area of 415.00 Acres for Iron Ore Minerals in Kumaraswamy & Subbarayanahalli Range, Sandur, Taluk, Bellary District – reg.

**Ref:** 1. Mining lease application No: 130/AML02, Dated: 24.10.2002.

2. This office notice No: DMG: 130/AML02/2007 – 08/ 3767, Dated: 20.06.2007.

**Preamble:**

The applications filed by you on 24.10.2002 vide Ref No: 1 for sanction of Iron Ore Minerals in Kumaraswamy & Subbarayanahalli, Sandur Taluk, Bellary District was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 20.06.2007 vide Ref N0: (2), as why your application should not be rejected for the above mentioned reason and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated:27.05.1995 do here by reject the application for grant of ML in favour M/s. Jindal Vijayanagar Steel Ltd., For the reasons stated above.

DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No. DMG: 20/APL95/2010-11/1352, Dated:23rd April, 2010**

**Sub:** Consideration of application filed by Smt. M. Surekha for grant of PL on 22.02.1995 over an area of 72.00 Acres for Industrial Quartz Minerals in Lingadahalli Village, Sandur, Taluk, Bellary District – reg.

**Ref:** 1. Mining lease application No: 20/APL95, Dated: 22.02.1995.

2. This office notice No: DMG:20/APL95/8201, Dated: 09.01.1998.

**Preamble:**

The applications filed by you on 22.02.1995 vide Ref No: 1 for sanction of Industrial Quartz Minerals in Lingadahalli Village, Sandur, Taluk, Bellary District was examined.

On verification it is found that, the above application overlaps with the earlier application filed, Accordingly the notice was issued under Rule 26(1) of MCR 1960 on 09.01.1998 vide Ref No: (2), as why your application should not be rejected for the above mentioned reason and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated:27.05.1995 do here by reject the application for grant of PL in favour Smt. M. Surekha For the reasons stated above.

DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No. DMG: 127/APL05/2009-10/1379, Dated:23rd April, 2010**

**Sub:** Consideration of application filed by Mr. N. Chandrappa for grant of PL on 22.07.2005 over an area of 42.00 Acres for Iron Ore & Manganese Ore Minerals in Jambunathana Village, Hospet Taluk, Bellary District – reg.

**Ref:** 1. Mining lease application No:127/APL05, Dated: 22.07.2005.

2. This office notice No: DMG:127/APL05/8665, Dated:21.10.2006.

**Preamble:**

The applications filed by you on 22.07.2005 vide Ref No: 1 for sanction of Iron Ore & Manganese Minerals in Jambunathana Village, Hospet Taluk, Bellary District was examined.

On verification it is found that, the above application overlaps with the ML No.1659, Accordingly the notice was issued under Rule 12(1) of MCR 1960 on 21.10.2006 vide Ref No.(2), as why your application should not be rejected for the above mentioned reason and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated:27.05.1995 do here by reject the application for grant of PL in favour Mr. N. Chandrappa For the reasons stated above.

DIRECTOR

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**No. DMG: 281/AML95/2010-11/1382, Dated:23rd April, 2010**

**Sub:** Consideration of application filed by M/s V.S.Lad & Sons for grant of ML on 29-07-95 over an Area Of 400.00 acres for Iron ore Minerals in Sogi Village, Hadagali Taluk, Bellary District – reg.

ವ ಪರ್ಮಿಟ್ ಇದೆಯೇ ಎಂದು ಕೇಳಿದಾಗ ಆತನು ಇದಕ್ಕೆ ಯಾವುದೇ ಪಾಸ್ ವ ಪರ್ಮಿಟ್ ಇಲ್ಲವಾಗಿ ತಿಳಿಸಿದರು. ಸದರಿ ಕಟ್ಟಿಗೆಗೆ ಸಂಬಂಧಿಸಿದಂತೆ, ಪಾಸ್ ವ ಪರ್ಮಿಟ್ ಇಲ್ಲದ್ದರಿಂದ ಅವುಗಳು ಅನಧಿಕೃತ ಕಟ್ಟಿಗೆಗಳು ಅಂತ ಖಾತ್ರಿ ಪಡಿಸಿಕೊಳ್ಳಲಾಯಿತು. ಸದರಿ ಸೀಳಿದ ಜಂಗ್ಲಿ ಜಾತಿಯ ಅಜಮಾಸ 4 ಕ್ವಿಂಟಲ್ ಕಟ್ಟಿಗೆ ಆಗಬಹುದಾಗಿ ತಿಳಿದುಬಂತು. ಗಾಡಿ ಪರಿಶೀಲಿಸಲಾಗಿ ಅದರ ಬಣ್ಣ ಗಿಳಿ ಹಸಿರಾಗಿದ್ದು ನಂ.ಕೆಎ–31–132 ಅಂತ ಮುಂದುಗಡೆ ಹಾಗೂ ಹಿಂದುಗಡೆಯಲ್ಲಿ ಬರೆಯಲಾಗಿತ್ತು. ಗಾಡಿಗೆ ಸಂಬಂಧಪಟ್ಟ ಯಾವುದೇ ರೀತಿಯ ಕಾಗದ ಪತ್ರಗಳು ದೊರೆಯಲಿಲ್ಲ. ವಲಯ ಅರಣ್ಯಾಧಿಕಾರಿಗಳು ತಮ್ಮೊಂದಿಗೆ ಕರೆತಂದಿದ್ದ ಇಬ್ಬರು ಪಂಚರಾದ ಶ್ರೀ ನವೀನ ಮೋಹನ ಶೆಟ್ಟಿ ಸಾ:ಶಿರಸಿ ಹಾಗೂ ಶ್ರೀ ಶಂಕರ ನಾರಾಯಣ ಗುಡ್ಡದ ಮನೆ ಸಾ:ಶಿರಸಿ ಇವರ ಸಮಕ್ಷಮ ಕಟ್ಟಿಗೆ ಹಾಗೂ ವಾಹನವನ್ನು ಪರಿಶೀಲಿಸಿ ವಾಹನವನ್ನು ತಮ್ಮ ತಾಬಾ ತೆಗೆದುಕೊಳ್ಳಲಾಯಿತು. ಸದರಿ ಜಪ್ತಿ ಕಟ್ಟಿಗೆ ಕಿಮ್ಮತ್ತು ರೂ.500 ಹಾಗೂ ವಾಹನದ ಬೆಲೆ ರೂ.30000–00 ಆಗಿರಬಹುದೆಂದು ಅಂದಾಜಿಸಲಾಯಿತು. ನಂತರ ವಾಹನ ಚಾಲಕನ ಹೆಸರು ಕೇಳಲಾಗಿ, ನಜೀರ ಅಹಮ್ಮದ್ ರಾಜೇಸಾಬ, ಸಾ:ಗೌಡಳ್ಳಿ ಎಂದು ತಿಳಿಸಿದನು. ಆತನನ್ನು ಬಂಧಿಸಿ ಆರೋಪಣಾ ಪಟ್ಟಿ ತಯಾರಿಸಿ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು ಇರುತ್ತದೆ. ಹಾಗೂ ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮ 24ಇ, 62, 71ಎ, ಬಿ, ಸಿ & ಇ ರಂತೆ ಗುನ್ನೆ ದಾಖಲಿಸಿಕೊಳ್ಳಲಾಯಿತು. ಹಾಗೂ ಮಾಲಿನ ಸಮೇತ ವಾಹನವನ್ನು ವಲಯ ಕಛೇರಿಯ ಆವರಣಕ್ಕೆ ತಂದು ಮುಂದಿನ ವಿಚಾರಣೆ ಕುರಿತು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ವರದಿ ಸಲ್ಲಿಸಲಾಯಿತು.

ದಿನಾಂಕ:24.06.1999ರ ಈ ಪ್ರಾಧಿಕಾರವು ಸದರಿ ವಾಹನ ಹಾಗೂ ಮಾಲನ್ನು ಇಲಾಖಾ ಭದ್ರತೆಯಲ್ಲಿಡಲು ವಲಯ ಅರಣ್ಯಾಧಿಕಾರಿ, ಶಿರಸಿರವರಿಗೆ ಆದೇಶಿಸಿತ್ತು. ನಂತರ ಅರಣ್ಯ ಅಪರಾಧದಲ್ಲಿ ಜಪ್ತಿಪಡಿಸಲಾದ ವಾಹನ ಸರಕು ಸಾಗಣಿಕೆ ರಿಕ್ಷಾ ನಂ.ಕೆಎ–31–132ನೇದರ ನೋಂದಾಯಿತ ಮಾಲೀಕರ ಹೆಸರು ಹಾಗೂ ವಿಳಾಸವನ್ನು ಕಳಿಸಿಕೊಡಬೇಕಾಗಿ ವಿನಂತಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿರವರಿಗೆ ಪತ್ರಿಸಲಾಯಿತು. ಅವರಿಂದ ಪ್ರತ್ಯುತ್ತರವಾಗಿ ವಾಹನದ ನೋಂದಾಯಿತ ಮಾಲೀಕನ ಹೆಸರು ಶ್ರೀ ಅಬ್ದುಲ್ ರೆಹಮಾನ ಹುಸೇನ್ ಸಾಬ ಸಾ:ಗೌಡಳ್ಳಿ ಎಂಬುದಾಗಿ ತಿಳಿದುಬಂತು.

ತದನಂತರ 24.06.1999, 20.11.1999, 24.12.1999 ಗಳಂದು ಈ ಕಛೇರಿ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಲಾಯಿತು. ಆ ಸಮಯದಲ್ಲಿ ವಾಹನದ ನೋಂದಾಯಿತ ಮಾಲೀಕರು, ತನಗೂ ನಡೆದ ಘಟನೆಗೂ ಯಾವುದೇ ಸಂಬಂಧವಿರುವುದಿಲ್ಲ. ಅಂತಹ ಉದ್ದೇಶ ತನಗೆ ಇರುವುದಿಲ್ಲ ತಾನು ಅತೀ ದುರ್ಬಲನಾಗಿದ್ದು ತನ್ನ ಕುಟುಂಬ ಸದಸ್ಯರೆಲ್ಲರ ಜೀವನ ನಿರ್ವಹಣೆ ಸದರಿ ವಾಹನದಿಂದಲೇ ಆಗಬೇಕಾಗಿದೆ ಸದರಿ ವಾಹನವನ್ನು ಇಲಾಖೆಯವರು ಜಪ್ತಿ ಪಡಿಸಿರುವುದರಿಂದ ತುಂಬಾ ಲುಕ್ಸಾನು ಆಗಿದೆ ಸನ್ನಿಧಿ ನ್ಯಾಯಾಲಯವು ವಾಹನವನ್ನು ತನಗೆ ನೀಡಿದಲ್ಲಿ ನ್ಯಾಯಾಲಯ ವಿಧಿಸುವ ಯಾವತ್ತು ಷರತ್ತುಗಳಿಗೆ ಬದ್ಧನಾಗಿರುವುದಾಗಿ ಅರ್ಜಿ ಸಲ್ಲಿಸಿರುತ್ತಾರೆ. ಮತ್ತು ಅರ್ಜಿದಾರರ ಪರ ವಕೀಲರು ವಾಹನದ ಮಧ್ಯಂತರ ಬಿಡುಗಡೆಗಾಗಿ ವಿನಂತಿಸಿಕೊಂಡಿರುತ್ತಾರೆ. ಅದರಂತೆ ಈ ಪ್ರಾಧಿಕಾರವು ದಿನಾಂಕ;24.12.1999 ರಂದು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಜಪ್ತು ವಾಹನವನ್ನು ವಾಹನ ಮಾಲೀಕರಿಗೆ ಮಧ್ಯಂತರ ವಶಕ್ಕೆ ನೀಡಿತು. ಷರತ್ತು (1) ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ರೂ.10000/– ಗಳ ಬ್ಯಾಂಕ್ ಗ್ಯಾರಂಟಿ ನೀಡುವುದು. (2) ಜಾಮೀನು (3) ನಷ್ಟಭರ್ತಿ ಕರಾರು ಪತ್ರ ನೀಡುವುದು. (4) ವಾಹನವನ್ನು ಮಾರಾಟ ಯಾ ಗುತ್ತಿಗೆ ಆಧಾರದ ಮೇಲೆ ಬೇರೆಯವರಿಗೆ ನೀಡಬಾರದಾಗಿ (5) ವಾಹನದ ಬಣ್ಣ ವ ಮಾದರಿ ಬದಲಾಯಿಸದೇ ಇರುವುದು ಇತ್ಯಾದಿ.

ವಾಹನ ಮಾಲೀಕರು ಮೇಲ್ಕಂಡ ಯಾವತ್ತು ಷರತ್ತುಗಳನ್ನು ಪೂರೈಸಿ ವಾಹನವನ್ನು ತಮ್ಮ ವಶಕ್ಕೆ ಮಧ್ಯಂತರ ಕಷ್ಟಡಿಗೆ ತೆಗೆದುಕೊಂಡಿರುತ್ತಾರೆ.

ತದನಂತರ ದಿನಾಂಕ:03.03.2001, 24.03.2001, 28.04.2001, 21.07.2001, 25.08.2001, 15.09.2001, 22.12.2001, 02.03.2002ಗಳಂದು ವಿಚಾರಣೆ ನಡೆಸಿ ವಲಯ ಅರಣ್ಯಾಧಿಕಾರಿ ಹಾಗೂ ಪಂಚರ ಸಾಕ್ಷಿಗಳನ್ನು ಪಡೆಯಲಾಯಿತು. ಅದರಲ್ಲಿ ವಲಯ ಅರಣ್ಯಾಧಿಕಾರಿ, ಶಿರಸಿ ಶ್ರೀ ಆರ್.ಜಿ. ನಾಯ್ಕ ಇವರ ಸಾಕ್ಷಿಯನ್ನು Exhibit P3(a) ಅಂತ ಗುರುತಿಸಿಕೊಂಡಿದ್ದು ಅವರ ಸಾಕ್ಷಿ ಸಾರಾಂಶ ಈ ರೀತಿ ಇದೆ.

"ಜೂನ್ 23, 1999 ರಂದು ಬೆಳಗಿನ ಜಾವ ನಾನು ವಸತಿಗೃಹದಲ್ಲಿದ್ದಾಗ ಅನಾಮಧೇಯ ಕರೆಬಂದಂತೆ ಇಬ್ಬರು ದಿನಗೂಲಿ ನೌಕರರನ್ನು ಕರೆದುಕೊಂಡು ಕಸ್ತೂರಬಾ ನಗರದ ಕಡೆಗೆ ಹೋದೆನು. ಕಸ್ತೂರಬಾ ನಗರಕ್ಕೆ ಹೋಗುತ್ತಿದ್ದಂತೆ ನಮ್ಮ ಎದುರಿಗೆ ರಿಕ್ಷಾ ಬರುತ್ತಿತ್ತು. ಅದನ್ನು ತಡೆದು ನಿಲ್ಲಿಸಿದೆವು. ರಿಕ್ಷಾ ಹಿಂದುಗಡೆ ಪರಿಶೀಲಿಸಲಾಗಿ ಜಂಗಲಿ ಜಾತಿಯ ಉರುವಲು ಕಟ್ಟಿಗೆ ತುಂಡುಗಳು ಇದ್ದದ್ದು ಕಂಡುಬಂತು. ರಿಕ್ಷಾ ಚಾಲನೆ ಮಾಡುತ್ತಿದ್ದವನ ಹತ್ತಿರ ಪಾಸ್ ಬಗ್ಗೆ ವಿಚಾರಿಸಿದಾಗ ಯಾವುದೇ

ಪಾಸ್ ವ ಪರ್ಮಿಟ್ ಇಲ್ಲವಾಗಿ ತಿಳಿಸಿದನು. ಹಾಗೂ ತಾನು ಗೌಡಳ್ಳಿ ಜಂಗಲ್‌ನಿಂದ ಬಿದ್ದ ಮರದಿಂದ ಕಟ್ಟಿಗೆ ಹೇರಿಕೊಂಡು ಬಂದಿರುವುದಾಗಿ ತಿಳಿಸಿದನು. ವಾಹನ ಹಾಗೂ ಮಾಲನ್ನು ಇಲಾಖಾ ವಶಕ್ಕೆ ತೆಗೆದುಕೊಳ್ಳಲಾಯಿತು. ಮತ್ತು ಸ್ಥಳದಲ್ಲಿ ಪಂಚನಾಮೆ ಬರೆದುಕೊಂಡು ವಾಹನ ಹಾಗೂ ಮಾಲನ್ನು ವಲಯ ಕಛೇರಿಗೆ ತರಲಾಯಿತು. ಹಾಗೂ ಅರಣ್ಯ ಮೊಕದ್ದಮೆ ದಾಖಲಿಸಲಾಯಿತು.'' ಈ ಸಾಕ್ಷಿ ವಿಚಾರಣೆಯಲ್ಲಿ ಜಪ್ತಿ ಪಡಿಸಿಕೊಂಡ ಸದರಿ ವಾಹನ ಹಾಗೂ ಮಾಲನ್ನು ಪಂಚನಾಮೆ ಹಾಗೂ ಪ್ರಥಮ ವರ್ತಮಾನ ವರದಿಯನ್ನು ನೀಡಿ ಗುರುತಿಸಿದ್ದು ಅವುಗಳನ್ನು ಕ್ರಮವಾಗಿ Exhibit P1(a), Exhibit P2 ಅಂತಲೂ ಅದರಲ್ಲಿರುವ ಈ ಸಾಕ್ಷಿ ಸಹಿಯನ್ನು Exhibit P2(a) ಅಂತಲೂ ತಪಾಸಣಾ ವರದಿಯನ್ನು Exhibit P3 ಅಂತಲೂ ಗುರುತಿಸಿಕೊಳ್ಳಲಾಯಿತು.

ಮರು ವಿಚಾರಣೆ ಇಲ್ಲಾ.

ಅಭಿಯೋಜಕರ ಪರ 2ನೇ ಸಾಕ್ಷಿಯಾಗಿ (ಪಿಡಬ್ಲ್ಯೂ–2) ಶ್ರೀ ಆರ್. ಮಹೇಶ್ವರಪ್ಪ, ಶಿರಸಿ ಇವರನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸಿದಾಗ ಅವರ ಸಾಕ್ಷಿಯಲ್ಲಿ ಮೂಡಿ ಬಂದ ಅಂಶಗಳು ಪಿಡಬ್ಲ್ಯೂ–1 ಸಾಕ್ಷಿಯ ಹೇಳಿಕೆಯನ್ನು ದೃಢಪಡಿಸುತ್ತದೆ. ಈ ಸಾಕ್ಷಿಯು ಜಪ್ತಿಪಡಿಸಲಾದ ವಾಹನ ಸರಕುಸಾಗಣೆ ರಿಕ್ಷಾ ನಂ.ಕೆಎ–31–132 ನೇದನ್ನು ಹಾಗೂ ಜಂಗಲಿ ಜಾತಿಯ ಉರುವಲು ಕಟ್ಟಿಗೆಗಳನ್ನು ತನ್ನನ್ನು ಪಂಚನನ್ನಾಗಿ ಮಾಡಿಕೊಂಡು ತನ್ನ ಸಮಕ್ಷಮ ಅಳತೆ ಮಾಡಿ ಜಪ್ತುಪಡಿಸಿಕೊಂಡ ಬಗ್ಗೆ ವಿಚಾರಣೆಯಲ್ಲಿ ನುಡಿದಿರುತ್ತಾರೆ.

ಈ ಸಾಕ್ಷಿಯ ಪಂಚನಾಮೆಯನ್ನು ಗುರುತಿಸಿದ್ದು ತನ್ನ ಸಹಿಯನ್ನು ನಿಶಾನೆ P1(b) ಎಂದು ಗುರುತಿಸಿರುತ್ತಾರೆ. ಸದರಿ ಪ್ರಕರಣಕ್ಕೆ ಸಂಬಂಧಿಸಿದ ಮಾಲನ್ನು ಈ ಸಾಕ್ಷಿಯು ಗುರುತಿಸಿದ್ದು MO-1 ಎಂದು ಗುರುತಿಸಲಾಗಿದೆ. ಈ ಬಗ್ಗೆ ಮರುವಿಚಾರಣೆ ಇಲ್ಲಾ.

ದಿನಾಂಕ:02.03.2002 ರಂದು ಅಭಿಯೋಜಕರ ಪರ 3ನೇ (ಪಿಡಬ್ಲ್ಯೂ–3) ಸಾಕ್ಷಿಯಾಗಿ ಶ್ರೀ ನವೀನ ಮೋಹನ ಶೆಟ್ಟಿ ಸಾ:ಬನವಾಸಿ ಇವರನ್ನು ವಿಚಾರಣೆಗೊಳಪಡಿಸಿದಾಗ ಅವರ ಸಾಕ್ಷಿಯಲ್ಲಿ ಮೂಡಿ ಬಂದ ಅಂಶಗಳು ಸಹ ಪಿಡಬ್ಲ್ಯೂ–1 ಹಾಗೂ ಪಿಡಬ್ಲ್ಯೂ–2 ಸಾಕ್ಷಿಯ ಹೇಳಿಕೆಗಳನ್ನು ದೃಢಪಡಿಸುತ್ತದೆ. ಗುನ್ಹೆ ನಡೆದ ದಿನ ಸರಕು ಸಾಗಣೆ ರಿಕ್ಷಾ ನಂ.ಕೆಎ–031–132 ಹಾಗೂ ಜಂಗಲಿ ಜಾತಿಯ ಮಾಲನ್ನು ತನ್ನನ್ನು ಪಂಚರನ್ನಾಗಿಸಿಕೊಂಡು ತನ್ನ ಸಮಕ್ಷಮ ಪರಿಶೀಲಿಸಿ ಅಳತೆ ಮಾಡಿ ಜಪ್ತುಪಡಿಸಿರುವುದಾಗಿ ಸಾಕ್ಷಿಯಲ್ಲಿ ನುಡಿದಿರುತ್ತಾರೆ. ಸಹಿಯನ್ನು ನಿಶಾನೆ P1(c) ಎಂದು ಗುರುತಿಸಲಾಯಿತು. ಈ ಬಗ್ಗೆ ಮರುವಿಚಾರಣೆ ಇಲ್ಲಾ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಭಿಯೋಜಕರ ಪರ ಸಾಕ್ಷಿಯ ಹೇಳಿಕೆಗಳನ್ನು ಪಡೆದಿದ್ದರಿಂದ ಹಾಗೂ ಅರ್ಜಿದಾರರ ಪರ ವಕೀಲರ ಪಾಟೀ ಸವಾಲುಗಳನ್ನು ಪರಿಗಣಿಸಿದ ನಂತರ ಈ ಕೆಳಗಿನ ಅಂಶಗಳನ್ನು ನಿರ್ಧರಿಸಬೇಕಾಗಿದೆ.

1) ಸದರಿ ವಾಹನವು ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡುವಾಗ ಅಮಾನತ್ತುಪಡಿಸಲಾಗಿದೆಯೇ?

2) ಅರಣ್ಯ ಅಪರಾಧದಲ್ಲಿ ವಾಹನದ ಮಾಲೀಕರು ಅಥವಾ ಚಾಲಕರು ಉದ್ದೇಶ ಪೂರ್ವಕವಾಗಿಯೇ ತಿಳಿದು ಭಾಗಿಯಾಗಿದ್ದಾರೆಯೇ?

3) ವಾಹನದ ಮಾಲೀಕರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಚಾಲಕ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿದ್ದಾರೆಯೇ?

4) ಅಪರಾಧದಲ್ಲಿ ಭಾಗಿಯಾಗಿದೆ ಎಂದು ಹೇಳಿರುವ ವಾಹನವನ್ನು ಅರ್ಜಿದಾರರ ಕೋರಿಕೆಯಂತೆ ಅಂತಿಮವಾಗಿ ಬಿಡುಗಡೆಗೊಳಿಸಬಹುದೆ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಇಂತಿವೆ.

1) ಹೌದು

2) ಹೌದು

3) ಇಲ್ಲ

4) ಅಂತಿಮ ಆದೇಶದಂತೆ

ಅಂಶ–1) ಸರ್ಕಾರದ ಪರ ಸಾಕ್ಷಿಗಳಾದ ಪಿಡಬ್ಲ್ಯೂ–1 ಮತ್ತು ಪಿಡಬ್ಲ್ಯೂ–2 & 3 ಇವರು ಪ್ರಥಮ ವರ್ತಮಾನ ವರದಿ ಹಾಗೂ ಪಂಚನಾಮೆಯಲ್ಲಿರುವಂತೆ ನುಡಿದಿರುತ್ತಾರೆ. ಅಂದರೆ, ವಲಯ ಅರಣ್ಯಾಧಿಕಾರಿ, ಶಿರಸಿರವರು ಕಸ್ತೂರಬಾ ನಗರಕ್ಕೆ ಬಂದಾಗ, ಅಲ್ಲಿ ರಸ್ತೆ ಬದಿಯಲ್ಲಿ ವಾಹನ ಸರಕು ಸಾಗಣೆ ರಿಕ್ಷಾದಲ್ಲಿ ಕಟ್ಟಿಗೆ ತುಂಬಿಕೊಂಡು ಬರುತ್ತಿರುವುದು

ಕಂಡುಬಂತು. ಕೂಡಲೇ ಸದರಿ ವಾಹನವನ್ನು ತಡೆದು ನಿಲ್ಲಿಸಿ ಈ ಕುರಿತು ಚಾಲಕನ ಹತ್ತಿರ ಕೇಳಲಾಗಿ ಗೌಡಳ್ಳಿಯ ಜಂಗಲ್‌ನಿಂದ ಬಿದ್ದ ಮರದಿಂದ ಸದರಿ ಕಟ್ಟಿಗೆಗಳನ್ನು ತಂದದ್ದಾಗಿ ತಿಳಿಸಿದನು. ಸದರಿ ಕಟ್ಟಿಗೆ ಜಂಗ್ಲಿ ಜಾತಿಯದ್ದಾಗಿದ್ದು ಕಂಡುಬಂತು. ಆದ್ದರಿಂದ ಅದಕ್ಕೆ ಪಾಸ್ ವ ಪರ್ಮಿಟ್ ಇದೆಯೇ ಎಂದು ಕೇಳಿದಾಗ ಆತನು ಇದಕ್ಕೆ ಯಾವುದೇ ಪಾಸ್ ವ ಪರ್ಮಿಟ್ ಇಲ್ಲವಾಗಿ ತಿಳಿಸಿದನು. ಸದರಿ ಕಟ್ಟಿಗೆಗೆ ಸಂಬಂಧಿಸಿದಂತೆ, ಪಾಸ್ ವ ಪರ್ಮಿಟ್ ಇಲ್ಲದ್ದರಿಂದ ಅವುಗಳು ಅನಧಿಕೃತ ಕಟ್ಟಿಗೆಗಳು ಅಂತ ಖಾತ್ರಿ ಪಡಿಸಿಕೊಳ್ಳಲಾಯಿತು. ಸದರಿ ಸೀಳಿದ ಜಂಗ್ಲಿ ಜಾತಿಯ ಅಜಮಾಸ 4 ಕ್ವಿಂಟಲ್ ಕಟ್ಟಿಗೆ ಆಗಬಹುದಾಗಿ ತಿಳಿದುಬಂತು. ಗಾಡಿ ಪರಿಶೀಲಿಸಲಾಗಿ ಅದರ ಬಣ್ಣ ಗಿಳಿ ಹಸಿರಾಗಿದ್ದು ನಂ.ಕೆಎ–31–132 ಅಂತ ಮುಂದುಗಡೆ ಹಾಗೂ ಹಿಂದುಗಡೆಯಲ್ಲಿ ಬರೆಯಲಾಗಿತ್ತು. ಗಾಡಿಗೆ ಸಂಬಂಧಪಟ್ಟ ಯಾವುದೇ ರೀತಿಯ ಕಾಗದ ಪತ್ರಗಳು ದೊರೆಯಲಿಲ್ಲ. ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮ 24ಇ, 62, 71ಎ, ಬಿ, ಸಿ & ಇ ರಂತೆ ಗುನ್ನೆ ದಾಖಲಿಸಿಕೊಳ್ಳಲಾಯಿತು. ಹಾಗೂ ಮಾಲಿನ ಸಮೇತ ವಾಹನವನ್ನು ವಲಯ ಕಛೇರಿಯ ಆವರಣಕ್ಕೆ ತಂದು ಮುಂದಿನ ವಿಚಾರಣೆ ಕುರಿತು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ವರದಿ ಸಲ್ಲಿಸಲಾಯಿತು.

ಸಾಕ್ಷಿಗಳ ಹೇಳಿಕೆ ಮತ್ತು ಪಂಚನಾಮೆಯಲ್ಲಿರುವ ವಿಷಯಗಳನ್ನು ಪರಿಶೀಲಿಸಿದಾಗ, ಘಟನೆ ನಡೆದ ಸ್ಥಳ, ದಿನಾಂಕ ಅಮಾನತ್ತು ಪಡಿಸಿಕೊಂಡ ಪದಾರ್ಥಗಳು ಒಂದಕ್ಕೊಂದು ತಾಳೆಯಾಗುತ್ತವೆ. ವಾಹನ ಸರಕು ಸಾಗಾಣಿಕೆ ರಿಕ್ಷಾ ನಂ.ಕೆಎ–31–132 ರಲ್ಲಿ ಜಂಗಲಿ ಜಾತಿಯ ಉರುವಲು ಕಟ್ಟಿಗೆಗಳು ತುಂಬಿಕೊಂಡಿರುವುದು. ಅದಕ್ಕೆ ಯಾವುದೇ ಪಾಸ್ ವ ಪರ್ಮಿಟ್ ಇಲ್ಲದೇ ಇರುವುದನ್ನು ಸವಿಸ್ತಾರವಾಗಿ ನುಡಿದಿರುತ್ತಾರೆ. ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ರಿಕ್ಷಾ ನಂ.ಕೆಎ–31–132 ವಾಹನ ಅಕ್ರಮವಾಗಿ ಜಂಗ್ಲಿ ಜಾತಿಯ ಕಟ್ಟಿಗೆ ತುಂಡುಗಳನ್ನು ಸಾಗಾಣಿಕೆ ಮಾಡುವುದರಲ್ಲಿ ಸಹಾಯವಾಗಿರುವುದು ದೃಢಪಟ್ಟಿರುತ್ತದೆ.

**ಅಂಶ–2, 3:** ವಾಹನ ಮಾಲೀಕರು, ನಡೆದ ಘಟನೆಗೂ ತನಗೂ ಯಾವುದೇ ಸಂಬಂಧ ಇರುವುದಿಲ್ಲ. ತನಗೆ ಸದರಿ ವಾಹನವೇ ಜೀವನಾಧಾರ ಎಂದು ವಿನಂತಿಸಿಕೊಂಡು ಈ ನ್ಯಾಯಾಲಯ ವಿಧಿಸಿದ ಯಾವತ್ತು ಷರತ್ತಿಗೆ ಒಪ್ಪಿಕೊಂಡು ವಾಹನವನ್ನು ಮಧ್ಯಂತರ ವಶಕ್ಕೆ ಬಿಡಿಸಿಕೊಂಡಿರುತ್ತಾರೆ. ಹಾಗೂ ವಾಹನದಲ್ಲಿ ಅಕ್ರಮ ಸಾಗಾಣಿಕೆ ನಡೆದ ಬಗ್ಗೆ ವಾಹನ ಮಾಲೀಕರ ಭಾಗಿತ್ವ ಇಲ್ಲದಿರುವ ಬಗ್ಗೆ ಯಾವುದೇ ಪುರಾವೆ ಒದಗಿಸಿರುವುದಿಲ್ಲ. ಕಾರಣ ವಾಹನ ಮಾಲೀಕರು ಸಹ ಈ ಅಪರಾಧದಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ. ತದನಂತರ ದಿನಾಂಕ:28.12.2001ಕ್ಕೆ ಬ್ಯಾಂಕ್ ಭದ್ರತೆ ಮುಗಿದಿದ್ದು ಅದನ್ನು ನವೀಕರಿಸಿ ನೀಡಬೇಕೆಂದು ಈ ನ್ಯಾಯಾಲಯವು 20.03.2002, 12.03.2007, 28.01.2009 ಗಳಂದು ಸೂಚನಾ ಪತ್ರ ನೀಡಿದಾಗ್ಯೂ ಬ್ಯಾಂಕ್ ಗ್ಯಾರಂಟಿಯನ್ನು ನವೀಕರಿಸಿ ಕೊಡದೇ ನ್ಯಾಯಾಲಯದ 1ನೇ ಷರತ್ತು ಮೀರಿರುತ್ತಾರೆ. ಆದ್ದರಿಂದ ನ್ಯಾಯಾಲಯದ ಷರತ್ತು ಉಲ್ಲಂಘನೆಯಾಗಿರುತ್ತದೆ. ಆದ ಕಾರಣ ಈ ನ್ಯಾಯಾಲಯವು ಅರ್ಜಿದಾರರು ಬ್ಯಾಂಕ್ ಗ್ಯಾರಂಟಿ ನೀಡಿದ ಕಾರ್ಪೋರೇಷನ್ ಬ್ಯಾಂಕ್ ಶಿರಸಿ ಇವರಿಗೆ ಪತ್ರಿಸಿ ರೂ.10000/–ಗಳ ಬ್ಯಾಂಕ್ ಗ್ಯಾರಂಟಿ ಹಣವನ್ನು ಡಿ.ಡಿ. ನಂ.280038 ದಿನಾಂಕ:23.10.2009ರಂತೆ ತರಿಸಿಕೊಂಡು ತನ್ನ ಭದ್ರತೆಯಲ್ಲಿ ಇರಿಸಿಕೊಳ್ಳಲಾಗಿದೆ. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಈ ಮೇಲಿನ ಅಂಶಗಳ ಹಾಗೂ ವಿವರಗಳ ಹಿನ್ನೆಲೆಯಲ್ಲಿ ವಲಯ ಅರಣ್ಯಾಧಿಕಾರಿ, ಶಿರಸಿವಲಯ, ಶಿರಸಿ ಇವರ ಅರಣ್ಯ ಮೊಕದ್ದಮೆ ಸಂಖ್ಯೆ:2/99–2000 ದಿನಾಂಕ:23.06.1999ಕ್ಕೆ ಸಂಬಂಧಿಸಿದಂತೆ ಸರ್ಕಾರದ ಪರ ಅಮಾನತ್ತು ಪಡಿಸಿದ್ದ ಸರಕು ಸಾಗಾಣಿಕೆ ರಿಕ್ಷಾ ಸಂಖ್ಯೆ: ಕೆಎ–31–132 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಹಾಗೂ ಮೇಲಿನ ಕಾರಣದಿಂದ ಮತ್ತು ಅರ್ಜಿದಾರರು ಮಧ್ಯಂತರ ಕಸ್ಟಡಿ ಆದೇಶವನ್ನು ಉಲ್ಲಂಘಿಸಿರುವುದರಿಂದ, ಮಧ್ಯಂತರ ಕಸ್ಟಡಿ ಪಡೆಯುವಾಗ ಪ್ರಾಧಿಕಾರಕ್ಕೆ ನೀಡಿದ ಡಿ.ಡಿ. ನಂ.280038 ದಿನಾಂಕ:23.10.2009 ರೂ.10,000/–ವನ್ನು ಸರ್ಕಾರಕ್ಕೆ ಜಮಾ ಮಾಡಲು ಆದೇಶಿಸಿದೆ. ಹಾಗೂ ಈ ಪ್ರಕರಣದಲ್ಲಿ ಜಪ್ತಿಪಡಿಸಿಕೊಂಡ ನಾಲ್ಕು ಕ್ವಿಂಟಲ್ ಜಂಗಲಿ ಜಾತಿಯ ಕಟ್ಟಿಗೆ ಹಾಗೂ ಆರೋಪಿ ವಿಚಾರಣೆ ಮಾನ್ಯ ಜೆ.ಎಮ್.ಎಫ್.ಸಿ. ಕೋರ್ಟಿನಲ್ಲಿ ದಿನಾಂಕ:21.06.2000 ದಂದು ನಿಖಾಲೆ ಆಗಿರುವುದರಿಂದ ಸದರಿ ಮಾಲನ್ನು ಸಹ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗೆ ಸದರಿ ವಾಹನ ಮಾಲೀಕರು ಮೇಲ್ಮನವಿ ಸಲ್ಲಿಸದೇ ಇದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ದಿನಾಂಕ:19.03.2010 ರಂದು ಈ ಪ್ರಾಧಿಕಾರದ ಮೊಹರು ಹಾಕಿ ಹೊರಡಿಸಲಾಗಿದೆ.

**ಮನೋಜಕುಮಾರ., ಭಾ.ಅ.ಸೇ.**

ಪಿಆರ್–502

ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ವಿಭಾಗ, ಶಿರಸಿ.

**ಆಡಳಿತಾಧಿಕಾರಿಗಳು, ಕೃಷ್ಣಾ ಕಾಡಾ, ಭೀಮರಾಯನಗುಡಿ, ತಾಲ್ಲೂಕು ಶಹಾಪುರ, ಜಿಲ್ಲೆ ಯಾದಗಿರಿ ಇವರ ನಡುವಳಿಗಳು**

**ವಿಷಯ:** ಶ್ರೀ ಗುರುಲಿಂಗಯ್ಯ, ಸಿಪಾಯಿ ಇವರು ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಸೇವೆಯಿಂದ ವಜಾಗೊಳಿಸುವ ಕುರಿತು.

**ಉಲ್ಲೇಖ:** 1) ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪವಿಭಾಗ ಸಂ:16 ಕೃಭಾಜನಿನಿ, ರಾಂಪೂರ ಇವರ ಜ್ಞಾಪನ ಪತ್ರ ಸಂ:ಕೃಭಾಜನಿನಿ:ಹೊಉವಿ–16:ರಾಂಪೂರ:ಸಿ–2:05–06: ದಿನಾಂಕ:16.09.2005, 03.11.2005 ಮತ್ತು 14.12.2005.

2) ಮುಖ್ಯ ಇಂಜಿನಿಯರು, ಕೃಭಾಜನಿ(ನಿ), ಕಾಲುವೆ ವಲಯ–2 ಕೆಂಭಾವಿ ಇವರ ಪತ್ರ ಸಂ: ಕೃಭಾಜನಿನಿ:ಕಾವ–2:ಇಎಸ್‌ಟಿ:ಅಗ್ಯೆ:2005–06:967/2, ದಿನಾಂಕ:31.03.2006.

3) ಈ ಕಾರ್ಯಾಲಯದ ಪತ್ರ ಸಂಖ್ಯೆ:ಕಾಡಾ:ಸಿ–1:90:05–06:552 ದಿನಾಂಕ:27.04.2006.

4) ಶ್ರೀ ಗುರುಲಿಂಗಯ್ಯಾ, ಸಿಪಾಯಿ ಇವರ ಮನವಿ ಅರ್ಜಿ ದಿನಾಂಕ:30.06.06.

5) ಈ ಕಾರ್ಯಾಲಯದ ಪತ್ರ ಸಂ:ಕಾಡಾ:ಸಿ–1:90:05–06:4636, ದಿನಾಂಕ:08.08.2006.

6) ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪವಿಭಾಗ ಸಂ:16: ಕೃಭಾಜನಿನಿ, ರಾಂಪೂರ ಇವರ ಜ್ಞಾಪನ ಪತ್ರ ಸಂಖ್ಯೆ: ಕೃಭಾಜನಿನಿ:ಹೊಉವಿ–16:ರಾಂಪೂರ:ಸಿಬ್ಬಂದಿ:2006–07:108 ದಿನಾಂಕ;07.09.2006.

7) ಈ ಕಾರ್ಯಾಲಯದ ಪತ್ರ ಸಂ:ಕಾಡಾ:ಸಿ–1:90:2005–06:6816 ದಿನಾಂಕ:24.11.2006.

8) ಸಮ ಸಂಖ್ಯೆ:7763 ದಿನಾಂಕ:29.12.2006.

9) ಮುಖ್ಯ ಇಂಜಿನಿಯರು, ಕೃಭಾಜನಿ(ನಿ), ಕಾಲುವೆ ವಲಯ–2 ಕೆಂಭಾವಿ ಇವರ ಪತ್ರ ಸಂ: ಕೃಭಾಜನಿನಿ:ಕಾವ–2:ಇಎಸ್‌ಎ:2008–09:774 ದಿನಾಂಕ:31.07.2006.

10) ಈ ಕಾರ್ಯಾಲಯದ ಪತ್ರ ಸಂ:ಕಾಡಾ:ಸಿ–1:ಅಗೈಹಾ:90:05–06:625, ದಿನಾಂಕ:19.05.2009.

11) ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪವಿಭಾಗ ಸಂ:16 ಕೃಭಾಜನಿನಿ, ರಾಂಪೂರ ಇವರ ಪತ್ರ ಸಂ: ಕೃಭಾಜನಿನಿ:ಹೊಉವಿ–16:ರಾಂಪೂರ: ಸಿಬ್ಬಂದಿ–2:09–10:233, ದಿನಾಂಕ:15.09.2009.

12) ಈ ಕಾರ್ಯಾಲಯದ ಅಂತಿಮ ನೋಟೀಸು ಸಂ: ಕಾಡಾ:ಸಿ–1:90:ಗೈಹಾ:05–06:4782 ದಿನಾಂಕ;12.12.2009.

13) ಶ್ರೀ ಗುರುಲಿಂಗಯ್ಯಾ, ಸಿಪಾಯಿ ಇವರ ಮನವಿ ದಿನಾಂಕ;06.01.2010.

14) ಶ್ರೀ ಗುರುಲಿಂಗಯ್ಯಾ, ಸಿಪಾಯಿ ಇವರ ಮನವಿ ದಿನಾಂಕ:08.03.2010.

**ಪ್ರಸ್ತಾವನೆ:**

ಶ್ರೀ ಗುರುಲಿಂಗಯ್ಯಾ, ಸಿಪಾಯಿ, ಇವರು ದಿನಗೂಲಿ ಸೇವೆಯಿಂದ ಸಕ್ರಮಗೊಂಡು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪವಿಭಾಗ ಸಂ:16 ಕೃಭಾಜನಿನಿ, ರಾಂಪುರ ಇವರ ಕಾರ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ, ಇವರು ದಿನಾಂಕ:12.08.2005 ರಿಂದ 17.08.2005 ರವರೆಗೆ ಸಾಂದರ್ಭಿಕ ರಜೆ ಹಾಗೂ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಳ್ಳಲು ಅನುಮತಿ ಕೋರಿ ರಜೆಯ ಮೇಲೆ ತೆರಳಿ ದಿನಾಂಕ:18.08.2005 ರಂದು ಕಾರ್ಯಾಲಯದ ಕೆಲಸಗಳಿಗೆ ಹಾಜರಾಗದಿರುವುದರಿಂದ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪವಿಭಾಗ ಸಂ:16 ಕೃಭಾಜನಿನಿ, ರಾಂಪೂರ ಇವರು ಉಲ್ಲೇಖ–1ರಲ್ಲಿ ತೋರಿಸಿರುವ ಜ್ಞಾಪನ ಪತ್ರಗಳ ಮೂಲಕ ಸರ್ಕಾರದ ಕೆಲಸಗಳಲ್ಲಿ ಅಡೆತಡೆಯಾಗುತ್ತಿರುವುದರಿಂದ ಕಾರ್ಯಾಲಯದ ಕೆಲಸಗಳಿಗೆ ಹಾಜರಾಗಲು ತಿಳಿಸಿದರೂ, ನೌಕರರು ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ ಕಾರ್ಯನಿರ್ವಾಹಕ ಅಭಿಯಂತರರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ

ಇಂಜಿನಿಯರು ಇವರುಗಳಿಗೆ ವರದಿ ಮಾಡಿರುವುದರಿಂದ ಮುಖ್ಯ ಇಂಜಿನಿಯರು ಕಾಲುವೆ ವಲಯ–2 ಕೃಭಾಜನಿನಿ, ಕೆಂಭಾವಿ ಇವರು ಉಲ್ಲೇಖ–2 ರಲ್ಲಿ ತೋರಿಸಿರುವ ಪತ್ರದ ಮೂಲಕ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರು ಸದರಿ ನೌಕರರಿಗೆ ಕೆಲಸಕ್ಕೆ ಹಾಜರಾಗಲು ನಿರ್ದೇಶನ ನೀಡಿದ್ದರೂ ಕೂಡಾ ಕರ್ತವ್ಯಕ್ಕೆ ಹಾಜರಾಗದೇ ದಿನಾಂಕ:18.08.2005 ರಿಂದ 30.09.2006ರ ವರೆಗೆ ವೈದ್ಯಕೀಯ ಕಾರಣಗಳಿಂದಾಗಿ ಪರಿವರ್ತಿತ ರಜೆಗಳನ್ನು ಮಂಜೂರಾತಿಗಾಗಿ ಅಂಚೆ ಮೂಲಕ ಅರ್ಜಿ ಸಲ್ಲಿಸಿರುವುದಾಗಿ ಮತ್ತು ಸದರಿ ನೌಕರರು ವಾಸ್ತವವಾಗಿ ಈ ದಿನಾಂಕದವರೆಗೆ ಇಲ್ಲಿಯವರೆಗೆ ಕಛೇರಿ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಇದರಿಂದಾಗಿ ಸದರಿ ನೌಕರರಿಗೆ ಸರ್ಕಾರದ ಕೆಲಸ ನಿರ್ವಹಿಸಲು ಆಸಕ್ತಿ ಇಲ್ಲದಂತೆ ಕಂಡುಬರುವುದರಿಂದ ಇವರ ಸೇವೆಯನ್ನು ಕೃಭಾಜನಿ(ನಿ) ಪ್ರಾಧಿಕಾರಕ್ಕೆ ಹಿಂದಕ್ಕೆ ಪಡೆದು ಬೇರೆ ಕಡೆಗೆ ವರ್ಗಾಯಿಸಲು ತಿಳಿಸಿರುವರು. ಉಲ್ಲೇಖ–3ರ ಈ ಕಾರ್ಯಾಲಯದ ಮೂಲಕ ಮುಖ್ಯ ಇಂಜಿನಿಯರವರಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂ:ಡಿಪಿಎಆರ್:3:ಎಸ್‌ಡಿಇ:94 ದಿನಾಂಕ:26.02.1994ರಲ್ಲಿಯಂತೆ ಸರ್ಕಾರಿ ನೌಕರನ ಗೈರು ಹಾಜರಿ ಅವಧಿ 4 ತಿಂಗಳು ಮೀರಿದಲ್ಲಿ ನಿಲಂಬನೆಯಲ್ಲಿಡಲು ತಿಳಿಸುವುದರಿಂದ, ಸರ್ಕಾರದ ನಿರ್ದೇಶನಗಳಂತೆ ಕ್ರಮ ಜರುಗಿಸಿ, ನೌಕರರ ಅನಧಿಕೃತ ಗೈರು ಹಾಜರು ಕುರಿತು, ಅವರ ವಿರುದ್ಧ ಶಿಸ್ತು ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಲು ಕೋರಲಾಗಿದೆ. ಉಲ್ಲೇಖ–4ರ ಅರ್ಜಿಯ ಮೂಲಕ ಸದರಿ ನೌಕರರು ದಿನಾಂಕ:12.08.2005 ರಿಂದ 31.05.2006ರ ವರೆಗೆ ಚಿಕಿತ್ಸೆಯನ್ನು ಪಡೆದ ನಂತರ ಕಾರ್ಯಾಲಯದ ಕರ್ತವ್ಯಕ್ಕೆ ಹಾಜರಾಗಲು ಹೋದಾಗ ಅವರ ಸಂಬಂಧಿಕರಲ್ಲಿ ಜಗಳವಾಗಿದ್ದು, ಜೀವಕ್ಕೆ ಅಪಾಯವಿರುವುದಾಗಿ ತಿಳಿಸಿ, ಕೆಲಸಕ್ಕೆ ಹಾಜರಾಗಲು ಆಗುವುದಿಲ್ಲವೆಂದು ಮತ್ತು ಈ ಪ್ರಾಧಿಕಾರದ ಅಧೀನದಲ್ಲಿ ಕೆಲಸಕ್ಕೆ ಹಾಜರಾಗಲು ಅಂಚೆ ಮೂಲಕ ವಿನಂತಿಸಿರುತ್ತಾರೆ. ಆದರೆ ಸರ್ಕಾರದ ಕೆಲಸಗಳಿಗೆ ಅಡೆತಡೆ ಮಾಡುವವರ ವಿರುದ್ಧ ಪೋಲೀಸ್ ಪ್ರಕರಣ ದಾಖಲಿಸದೇ, ಇಲ್ಲಿಯವರೆಗೆ ಇದೇ ಕಾರಣ ನೀಡುತ್ತಾ ಕಾರ್ಯಾಲಯದ ಕೆಲಸಗಳಿಗೆ ಸುಧೀರ್ಘವಾಗಿ ಗೈರುಹಾಜರಾಗಿರುವುದು ಸಕಾರಣವಾಗಿರುವುದಿಲ್ಲ. ಕಾರಣ ಈ ವಿಷಯವಾಗಿ ಉಲ್ಲೇಖ–5ರ ಈ ಕಾರ್ಯಾಲಯದ ಪತ್ರದ ಮೂಲಕ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರಿಗೆ ವಿವರವಾದ ಮಾಹಿತಿ ಪಡೆದುಕೊಂಡು ದಾಖಲೆಗಳೊಂದಿಗೆ ಪರಿಶೀಲಿಸಿ ವರದಿ ಸಲ್ಲಿಸಲು ತಿಳಿಸಲಾಗಿದೆ. ಉಲ್ಲೇಖ–6ರಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರು, ಕಾರ್ಯನಿರ್ವಾಹಕ ಇಂಜಿನಿಯರು ಹೊಲಗಾಲುವೆ ವಿಭಾಗ ಸಂ:4, ಕೃ.ಭಾ.ಜ.ನಿ.(ನಿ), ಆಲಮೇಲ, ಇವರಿಗೆ ವರದಿ ಸಲ್ಲಿಸಿ ಶ್ರೀ ಗುರುಲಿಂಗಯ್ಯ, ಸಿಪಾಯಿ ಇವರು ದಿನಾಂಕ:12.08.2005 ರಿಂದ ಕಛೇರಿ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಹಾಗೂ ರಜೆ ಮುಂದುವರೆಸಿದ ಕುರಿತು ಮಾಹಿತಿ/ ಅರ್ಜಿ ಕಾರ್ಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇವರು ರಾಂಪೂರ ಕ್ಯಾಂಪಿನಲ್ಲಿಯೇ ವಾಸಿಸುತ್ತಿದ್ದರೂ ಕೂಡಾ ವೈದ್ಯಕೀಯ ಪ್ರಮಾಣ ಪತ್ರಗಳೊಂದಿಗೆ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಅವರ ಸಂಬಂಧಿಕರು ಮಾನಸಿಕ ಹಿಂಸೆ ಕೊಡಲು ಕಾರಣವೇನು ಎಂಬುದು ತಿಳಿದುಬಂದಿರುವುದಿಲ್ಲ. ಹಾಗೂ ಇವರ ಕರ್ತವ್ಯ ನಿರ್ವಹಣೆಗೆ ಯಾವ ತರಹದ ಸಂಬಂಧ ಇರುವುದಿಲ್ಲವೆಂದು ವರದಿ ಮಾಡಿರುವರು. ಉಲ್ಲೇಖ–7 ಮತ್ತು 8ರ ಈ ಕಾರ್ಯಾಲಯದ ಪತ್ರಗಳ ಮೂಲಕ ಸದರಿ ನೌಕರರಿಗೆ ಮರಳಿ ಕೆಲಸಕ್ಕೆ ಹಾಜರಾಗದೇ ಇರುವುದಕ್ಕೆ ಕಾರಣ ಕೇಳುವ ನೋಟೀಸು ಜಾರಿ ಮಾಡಿ ಶಿಸ್ತು ಕ್ರಮಗಳಿಗಾಗಿ ನೌಕರರ ವಿರುದ್ಧ ಆರೋಪ ಪಟ್ಟಿಗಳನ್ನು ತಯಾರಿಸಿ ಸಲ್ಲಿಸಲು ತಿಳಿಸಲಾಗಿದೆ. ಉಲ್ಲೇಖ–9ರಲ್ಲಿ ಮುಖ್ಯ ಇಂಜಿನೀಯರು ಕಾಲುವೆ ವಲಯ–2 ಕೃಭಾಜನಿ(ನಿ) ಕೆಂಭಾವಿ ಇವರು ಸದರಿ ನೌಕರರ ವಿರುದ್ಧ ಆರೋಪ ಪಟ್ಟಿಗಳನ್ನು ಅನುಬಂಧ–1 ರಿಂದ 4ರಲ್ಲಿ ತಯಾರಿಸಿ ಅನುಮೋದನೆಗಾಗಿ ಸಲ್ಲಿಸಿರುವುದನ್ನು ಪರಿಶೀಲಿಸಿ ಉಲ್ಲೇಖ–10ರ ಈ ಕಾರ್ಯಾಲಯದ ಪತ್ರದ ಮೂಲಕ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಮೇರೆಗೆ ಶಿಸ್ತುಕ್ರಮ ಜರುಗಿಸುವ ಕುರಿತು ಕಾರಣ ಕೇಳುವ ನೋಟೀಸಿನೊಂದಿಗೆ ಆಪಾದನಾ ಪಟ್ಟಿ 1 ರಿಂದ 4ರಲ್ಲಿ ಜಾರಿ ಮಾಡಿ 15 ದಿನಗಳಲ್ಲಿ ಆರೋಪಗಳ ಕುರಿತು ರಕ್ಷಣಾತ್ಮಕ ಲಿಖಿತ ಹೇಳಿಕೆಯನ್ನು ಕಾರ್ಯಾಲಯದ ಮುಖ್ಯಸ್ಥರ ಮೂಲಕ ಸಲ್ಲಿಸಲು ಮತ್ತು ಮೌಖಿಕವಾಗಿ ಹೇಳಲು ಸಹ ಸದರಿ ನೌಕರರಿಗೆ ಅವಕಾಶ ನೀಡಲಾಗಿತ್ತು. ಉಲ್ಲೇಖ–11 ರಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರು ಸದರಿ ನೋಟೀಸನ್ನು ಆಪಾದಿತರಿಗೆ ಜಾರಿಗೊಳಿಸಿ ಅವರಿಂದ ದಿನಾಂಕ:09.09.2009ರಂದು ಸ್ವೀಕೃತಿ ಪಡೆದು ಸಲ್ಲಿಸಿರುವರು. ಉಲ್ಲೇಖ–12ರಲ್ಲಿ ಆಪಾದಿತರು ಆರೋಪಗಳಿಗೆ ಉತ್ತರ ನೀಡದೇ ಇರುವುದಕ್ಕೆ ಏಕಪಕ್ಷೀಯವಾಗಿ ಕ್ರಮಜರುಗಿಸುವುದಾಗಿ ಅಂತಿಮ ನೋಟೀಸನ್ನು ಜಾರಿಗೊಳಿಸಲಾಗಿದೆ. ಸದರಿ ನೋಟೀಸಿಗೆ ಆಪಾದಿತರು, ಈ ಹಿಂದೆ ನೀಡಿರುವ ಕಾರಣಗಳನ್ನೇ ನೀಡಿ, ಉಲ್ಲೇಖ–13 ಮತ್ತು 14ರನ್ವಯ, ಸದ್ಯ ಕೆಲಸ ನಿರ್ವಹಿಸುತ್ತಿರುವ ರಾಂಪೂರ ಹತ್ತಿರ ಅವರ ಸಂಬಂಧಿಕರಲ್ಲಿ ವೈಯಕ್ತಿಕ ಜಗಳವಾಗಿದ್ದು ಜೀವದ ಬೆದರಿಕೆ ಇರುವುದರಿಂದ ದಿನಾಂಕ:12.08.2005 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರು ಉಳಿದಿರುವುದಾಗಿ ತಿಳಿಸಿ ಬೇರೆ ಕಾರ್ಯಾಲಯಗಳಿಗೆ ವರ್ಗಾಯಿಸಲು ವಿನಂತಿಸಿರುತ್ತಾರೆ.

ಈ ಕೆಳಕಂಡ ಕಾರಣಗಳಿಂದಾಗಿ, ಸದರಿ ನೌಕರರ ದಿನಾಂಕ:06.01.2010 ಮತ್ತು 08.03.2010ರ ಮನವಿಗಳನ್ನು ತಿರಸ್ಕರಿಸಲಾಗಿದೆ.

1) ನೌಕರರು ಜೀವಕ್ಕೆ ಬೆದರಿಕೆ ಇರುವ ಬಗ್ಗೆ ದೀರ್ಘಾವಧಿವರೆಗೆ ಪೋಲಿಸ್ ಪ್ರಕರಣ ದಾಖಲಿಸದಿರುವುದು.

2) ನೌಕರರು ಸಲ್ಲಿಸಿದ ಮನವಿಗಳು ಪರಿಗಣಿಸಲು ಯೋಗ್ಯ ಇರದಿರುವುದರಿಂದ ಮತ್ತು ಅನಧಿಕೃತ ಗೈರು ಹಾಜರು ಇರುವುದನ್ನು ಒಪ್ಪಿಕೊಂಡಿರುವರು.

3) ನೌಕರರು ಕಾರ್ಯಾಲಯದ ಕೆಲಸಕ್ಕೆ ಇದುವರೆಗೂ ಹಾಜರಾಗದಿರುವುದು.

4) ನೌಕರರು ಸರ್ಕಾರದ ಕೆಲಸದಲ್ಲಿ ಆಸಕ್ತಿ ಇಲ್ಲದಿರುವುದು.

ಮೇಲೆ ತೋರಿಸಿರುವ ಕಾರಣಗಳಿಂದಾಗಿ ಶ್ರೀ ಗುರುಲಿಂಗಯ್ಯ, ಸಿಪಾಯಿ ಇವರನ್ನು ಸರ್ಕಾರದ/ ಪ್ರಾಧಿಕಾರ ಕೆಲಸದಿಂದ ತೆಗೆದು ಹಾಕಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಕಾಡಾ:ಸಿ–1:90:ಗೈಹಾ:05–06:7368, ದಿನಾಂಕ:24ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಈ ಪ್ರಾಧಿಕಾರದ ನೌಕರರಾದ ಶ್ರೀ ಗುರುಲಿಂಗಯ್ಯ, ಸಿಪಾಯಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಹೊಲಗಾಲುವೆ ವಿಭಾಗ ಸಂಖ್ಯೆ:16 ಕೃಭಾಜನಿ(ನಿ) ರಾಂಪೂರ ಇವರು ದಿನಾಂಕ:12.08.2005 ರಿಂದ ಇಲ್ಲಿಯವರೆಗೆ ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತ ಗೈರುಹಾಜರಾಗಿ ಉಳಿದಿರುವುದರಿಂದ ಮತ್ತು ಕಾರಣ ಕೇಳುವ ನೋಟೀಸು, ಆರೋಪಗಳಿಗೆ ಸಮಂಜಸವಾದ ವಿವರಣೆ ನೀಡದಿರುವ ಪ್ರಯುಕ್ತ ಹಾಗೂ ಮನವಿಗಳಲ್ಲಿ ಅನಧಿಕೃತ ಗೈರುಹಾಜರಿ ಒಪ್ಪಿಕೊಂಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮ–108 ರನ್ವಯ ಶ್ರೀ ಗುರುಲಿಂಗಯ್ಯ, ಸಿಪಾಯಿ ಇವರನ್ನು ಅವರ ಅನಧಿಕೃತ ಗೈರುಹಾಜರಿಯಿಂದಾಗಿ, ದಿನಾಂಕ:12.08.2005 ರಿಂದ ಜಾರಿಗೆ ಬರುವಂತೆ ಸರ್ಕಾರದ/ ಪ್ರಾಧಿಕಾರದ ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

**ಮುನೀಶ ಮೌದಗೀಲ್., ಭಾ.ಆ.ಸೇ.**

ಪಿಆರ್–519

ಆಡಳಿತಾಧಿಕಾರಿಗಳು ಮತ್ತು ಶಿಸ್ತು ಪ್ರಾಧಿಕಾರಿಗಳು,

ಕೃಷ್ಣಾ ಕಾಡಾ, ಭೀಮರಾಯನಗುಡಿ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ

**ಸಂಖ್ಯೆ:ಎ1.71ಎ.ಅಮೊ.21/08–09, ದಿನಾಂಕ:25ನೇ ಮಾರ್ಚ್, 2010**

**ಉಪಸ್ಥಿತರು:** ಶ್ರೀ ಎಸ್. ವೆಂಕಟೇಸನ್, ಭಾ.ಅ.ಸೇ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಫಿರ್ಯಾದಿ:** ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

**ಪ್ರಸ್ತಾವನೆ:**

ದಿನಾಂಕ:06.08.2008ರಂದು ಒಂದು ಮಾರುತಿ ಓಮಿನಿ ವ್ಯಾನ್ ವಾಹನ ನೊಂದಣಿ ಸಂಖ್ಯೆ:ಕೆಎ–21–ಎಂ–743 ರಲ್ಲಿ ಒಟ್ಟು ಸಾಗುವಾನಿ 08=0.334 ಎಂ3 ತುಂಡುಗಳನ್ನು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ–ಸಾಗರ ಬಿ.ಹೆಚ್. ರಸ್ತೆಯಲ್ಲಿ ಮಲ್ಲಿಗೇನಹಳ್ಳಿ ದೊಡ್ಡ ಆಲದ ಮರದ ಎದುರು ರಸ್ತೆಯಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದಾಗ, ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಸಾಗುವಾನಿ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಮತ್ತು ಸಾಗುವಾನಿ ತುಂಡುಗಳ ಮೇಲೆ ಅರಣ್ಯ ಮೊಕದ್ದಮೆ ಸಂಖ್ಯೆ:21/2008–09ನ್ನು ದಾಖಲು ಮಾಡಿಕೊಂಡಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಯು ಪರಾರಿಯಾಗಿರುತ್ತಾರೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಸಾಗುವಾನಿ

ತುಂಡುಗಳನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು: ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದ್ದಲ್ಲಿ ವಾಹನ ಮತ್ತು ಸಾಗುವಾನಿ ತುಂಡುಗಳನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದಾಗಿ ಪ್ರಕಟಣೆಯನ್ನು ದಿನಾಂಕ:13.02.2009ರ ಸ್ಥಳೀಯ ಈ ಪತ್ರಿಕೆ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:29.01.2009ರ ಭಾಗ–3, ಪುಟ ಸಂಖ್ಯೆ:129ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿತ್ತು.

ಈ ಮಧ್ಯೆ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಲ್ಲಿ ಪತ್ರ ವ್ಯವಹರಿಸಿದಾಗ, ಸದರಿಯವರು ನೊಂದಣಿ ಸಂಖ್ಯೆ: ಕೆಎ–21–ಎಂ–743ರ ವಾಹನದ ಬಿ ವಹಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ, ವಾಹನವು ಮೊಹಮದ್ ದಸ್ತಗೀರ್ ಬಿನ್ ಮೊಹಮದ್ ಸಾಬ್, ತೀರ್ಥಹಳ್ಳಿ ಎಂಬುವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ, ಶ್ರೀ ಮಹಮದ್ ದಸ್ತಗೀರ್, ಇವರಿಗೆ ಈ ಕಛೇರಿಯಿಂದ ದಿನಾಂಕ:22.09.2009 ರಂದು ಕಾರಣ ಕೇಳುವ ಪತ್ರವನ್ನು ಜಾರಿ ಮಾಡಲಾಗಿ, ಸದರಿ ಪತ್ರ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಈ ಮಧ್ಯೆ ವಾಹನದಲ್ಲಿದ್ದ ಜೆರಾಕ್ಸ್ ಆರ್.ಸಿ. ಪುಸ್ತಕದ ಪತ್ರದನ್ವಯ ಶ್ರೀ ಮೊಹಮದ್ ದಸ್ತಗೀರ್ ಬಿನ್ ಮುನೀರ್ ಸಾಬ್, ಹಣಿಗೆರೆ ಕಟ್ಟೆ ವಾಸಿ, ತೀರ್ಥಹಳ್ಳಿ ತಾಲ್ಲೂಕು ಇವರಿಗೆ ಈ ಕಛೇರಿಯಿಂದ 19.01.2009ರಂದು ಮತ್ತು ದಿನಾಂಕ:07.05.2009 ರಂದು ಕಾರಣ ಕೇಳುವ ಪತ್ರವನ್ನು ಜಾರಿ ಮಾಡಲಾಗಿರುತ್ತದೆ. ಸದರಿ ಪತ್ರಕ್ಕೆ ಯಾವುದೇ ಉತ್ತರ ಬಂದಿರುವುದಿಲ್ಲ.

ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಸಾಭೀತು ಮಾಡುವ ಹೊಣೆಯನ್ನು ಹೊರಬೇಕಾಗುತ್ತದೆ.

ಮುಂದುವರೆದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಸಹ ವಾಹನ ಮಾಲೀಕರು ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲವೆಂದು ಸಾಬೀತು ಪಡಿಸಲು ವಿಫಲರಾಗಿರುತ್ತಾರೆ. ಹಾಗೂ ವಾಹನವನ್ನು ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರಿತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನವನ್ನು ಸುಸ್ಥಿತಿಯಲ್ಲಿ ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತು ಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬಾರದೇ ಇರುವುದರಿಂದ, ಇನ್ನು ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ, ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:06.08.2008ರಂದು ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಪಿರ್ಯಾದುದಾರರು ಪತ್ತೆಹಚ್ಚಿ ಸ್ಥಳ ಪಂಚನಾಮೆಯೊಂದಿಗೆ ಅಕ್ರಮ ಸಾಗುವಾನಿ ತುಂಡುಗಳನ್ನು ಹಾಗೂ ವಾಹನವನ್ನು ವಶಪಡಿಸಿಕೊಂಡು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ, ಹಾಗೂ ಈ ಪ್ರಕರಣದಲ್ಲಿ ಮಾಲೀಕರು ಈ ಅರಣ್ಯ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಸ್ತುಗಳು ತಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾಗುವಾನಿ ತುಂಡುಗಳು ಅರಣ್ಯ ಕಾಯ್ದೆ 80ರಂತೆ ಸರ್ಕಾರದ ಸ್ವತ್ತೆಂದು ರುಜುವಾತಾಗಿರುತ್ತದೆ.

ಆದ್ದರಿಂದ, ದಿನಾಂಕ:06.08.2008ರಂದು ಮಾರುತಿ ಓಮಿನಿ ವ್ಯಾನ್ ನೊಂದಣಿ ಸಂಖ್ಯೆ:ಕೆಎ–21–ಎಂ–743 ರಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಇನ್ನು ಕಾಲಾವಕಾಶ ನೀಡುವುದು ಅನಾವಶ್ಯವೆಂದು ನಿರ್ಣಯಿಸಿ ಏಕಪಕ್ಷೀಯ

ನಿರ್ಣಯ ಕೈಗೊಂಡು, ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಮೇರೆಗೆ ಶ್ರೀ ಎಸ್. ವೆಂಕಟೇಸನ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71–ಎ ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಅರಣ್ಯ ಮೊಕದ್ದಮೆ ಸಂಖ್ಯೆ:21/2008–09 ದಿನಾಂಕ:06.08.2008ರಂದು ವಶಪಡಿಸಿಕೊಂಡ ವಾಹನ ಮಾರುತಿ ಓಮಿನಿ ವ್ಯಾನ್ ನೊಂದಣಿ ಸಂಖ್ಯೆ:ಕೆಎ–21–ಎಂ–743 ಮತ್ತು ಸಾಗುವಾನಿ ತುಂಡು 08=0.334 ಎಂ3 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಸಾಗುವಾನಿ ತುಂಡುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ದಿನಾಂಕ:25.03.2010 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಭಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25.03.2010 ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಎಸ್. ವೆಂಕಟೇಸನ್, ಭಾ.ಅ.ಸೇ.,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

ಪಿಆರ್–568

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ**

**ಸಂಖ್ಯೆ:ಎ1.71ಎ.ಅಮೊ.09/08–09, ದಿನಾಂಕ:25ನೇ ಮಾರ್ಚ್, 2010**

**ಉಪಸ್ಥಿತರು:** ಶ್ರೀ ಎಸ್. ವೆಂಕಟೇಸನ್, ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಪಿರ್ಯಾದಿ:** ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

**ಪ್ರಸ್ತಾವನೆ:**

ದಿನಾಂಕ:19.06.2008ರಂದು ಒಂದು ಮಾರುತಿ ಓಮಿನಿ ವ್ಯಾನ್ ವಾಹನ ನೊಂದಣಿ ಸಂಖ್ಯೆ:ಕೆಎ–17–ಎಂ–7120 ರಲ್ಲಿ ಒಟ್ಟು ಸಾಗುವಾನಿ ಪಟ್ಟಿ ತುಂಡುಗಳು 6=0.168 ಎಂ3 ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ ನಗರದ ಸೀಗೇಹಟ್ಟಿ ಕಲ್ಲಪ್ಪನ ಕೇರಿಯಲ್ಲಿರುವ ಶ್ರೀ ಮೂಕಾಂಬಿಕ ವುಡ್ ವರ್ಕ್ಸ್ ಎದುರು ರಸ್ತೆಯಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದಾಗ, ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಸಾಗುವಾನಿ ಪಟ್ಟಿ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಮತ್ತು ಸಾಗುವಾನಿ ಪಟ್ಟಿ ತುಂಡುಗಳ ಮೇಲೆ ಅರಣ್ಯ ಮೊಕದ್ದಮೆ ಸಂಖ್ಯೆ:09/2008–09ನ್ನು ದಾಖಲು ಮಾಡಿಕೊಂಡಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪರಾರಿಯಾಗಿರುತ್ತಾರೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಸಾಗುವಾನಿ ಪಟ್ಟಿ ತುಂಡುಗಳನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು: ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದ್ದಲ್ಲಿ ವಾಹನ ಮತ್ತು ಸಾಗುವಾನಿ ಪಟ್ಟಿ ತುಂಡುಗಳನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದಾಗಿ ಪ್ರಕಟಣೆಯನ್ನು ದಿನಾಂಕ:14.07.2008ರಂದು ಸ್ಥಳೀಯ ವಾಯ್ಸ್ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:24.07.2008ರ ಭಾಗ–3, ಪುಟ ಸಂಖ್ಯೆ:2822ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿತ್ತು.

ಈ ಮಧ್ಯೆ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಲ್ಲಿ ಪತ್ರ ವ್ಯವಹರಿಸಿದಾಗ, ಸದರಿಯವರು ನೊಂದಣಿ ಸಂಖ್ಯೆ: ಕೆಎ–17–ಎಂ–7120ರ ವಾಹನದ ಬಿ ವಹಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ, ವಾಹನವು ಶ್ರೀ ಸೈಯದ್ ಪರ್ವಿಜ್ ಬಿನ್ ಸೈಯದ್ ಅಹಮದ್ ನಂ.5–3–1 ಅಜಾದ್‌ನಗರ, ಮಸೀದಿ ರಸ್ತೆ, ಎಡಭಾಗ, ಶಿವಮೊಗ್ಗ ಎಂಬುವವರ ಹೆಸರಿನಲ್ಲಿರುತ್ತದೆ. ಅನಂತರ ಸಾರಿಗೆ ಇಲಾಖೆಯಿಂದ ಬಂದ ವರದಿಯನ್ವಯ ಶ್ರೀ ಸೈಯದ್ ಪರ್ವಿನ್ ಇವರಿಗೆ ಈ ಕಛೇರಿಯಿಂದ ದಿನಾಂಕ:29.08.2008 ಮತ್ತು 20.09.2008ರಂದು ಎರಡು ಭಾರಿ ಕಾರಣ ಕೇಳುವ ಪತ್ರವನ್ನು ರಿಜಿಸ್ಟರ್ ಅಂಚೆ ಮುಖಾಂತರ ಕಳುಹಿಸಿದ್ದು, ಎರಡು ಪತ್ರವೂ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಸಾಭೀತು ಮಾಡುವ ಹೊಣೆಯನ್ನು ಹೊರಬೇಕಾಗುತ್ತದೆ.

ಮುಂದುವರೆದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಸಹ ವಾಹನ ಮಾಲೀಕರು ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ತಾವು ತಪ್ಪಿತಸ್ಥರಲ್ಲವೆಂದು ಸಾಬೀತು ಪಡಿಸಲು ವಿಫಲರಾಗಿರುತ್ತಾರೆ. ಹಾಗೂ ವಾಹನವನ್ನು ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರಿತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನವನ್ನು ಸುಸ್ಥಿತಿಯಲ್ಲಿ ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತು ಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬಾರದೇ ಇರುವುದರಿಂದ, ಇನ್ನು ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ, ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:19.06.2008ರಂದು ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ಪಟ್ಟಿ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಫಿರ್ಯಾದುದಾರರು ಪತ್ತೆಹಚ್ಚಿ ಸ್ಥಳ ಪಂಚನಾಮೆಯೊಂದಿಗೆ ಅಕ್ರಮ ಸಾಗುವಾನಿ ಪಟ್ಟಿ ತುಂಡುಗಳನ್ನು ಹಾಗೂ ವಾಹನವನ್ನು ವಶಪಡಿಸಿಕೊಂಡು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ, ಹಾಗೂ ಈ ಪ್ರಕರಣದಲ್ಲಿ ಮಾಲೀಕರಾಗಲೀ ಅಥವಾ ಓಡಿಹೋದ ಆಸಾಮಿಗಳಾಗಲೀ ವಶಪಡಿಸಿಕೊಂಡ ಸಾಗುವಾನಿ ಪಟ್ಟಿ ತುಂಡುಗಳು ತಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾಗುವಾನಿ ಪಟ್ಟಿ ತುಂಡುಗಳು ಅರಣ್ಯ ಕಾಯ್ದೆ 80ರಂತೆ ಸರ್ಕಾರದ ಸ್ವತ್ತೆಂದು ರುಜುವಾತಾಗಿರುತ್ತದೆ.

ಆದ್ದರಿಂದ, ದಿನಾಂಕ:19.06.2008ರಂದು ಮಾರುತಿ ಓಮಿನಿ ವ್ಯಾನ್ ನೊಂದಣಿ ಸಂಖ್ಯೆ:ಕೆಎ–17–ಎಂ–7120 ರಲ್ಲಿ ಅಕ್ರಮವಾಗಿ ಸಾಗುವಾನಿ ಪಟ್ಟಿ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಇನ್ನು ಕಾಲಾವಕಾಶ ನೀಡುವುದು ಅನಾವಶ್ಯವೆಂದು ನಿರ್ಣಯಿಸಿ ಏಕಪಕ್ಷೀಯ ನಿರ್ಣಯ ಕೈಗೊಂಡು, ಸದರಿ ವಾಹನ ಮತ್ತು ಸಾಗುವಾನಿ ಪಟ್ಟಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಮೇರೆಗೆ ಶ್ರೀ ಎಸ್. ವೆಂಕಟೇಸನ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71–ಎ

ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಅರಣ್ಯ ಮೊಕದ್ದಮೆ ಸಂಖ್ಯೆ:09/2008–09 ದಿನಾಂಕ:19.06.2008ರಂದು ವಶಪಡಿಸಿಕೊಂಡ ವಾಹನ ಮಾರುತಿ ಓಮಿನಿ ವ್ಯಾನ್ ನೊಂದಣಿ ಸಂಖ್ಯೆ:ಕೆಎ–17–ಎಂ–7120 ಮತ್ತು ಸಾಗುವಾನಿ ಪಟ್ಟಿ ತುಂಡು 6=0.168 ಎಂ3 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಸಾಗುವಾನಿ ಪಟ್ಟಿ ತುಂಡುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:25.03.2010 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಭಾದ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25.03.2010 ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಎಸ್. ವೆಂಕಟೇಸನ್, ಭಾ.ಅ.ಸೇ.,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

ಪಿಆರ್–569

## ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ

**ಉಪಸ್ಥಿತರು:** ಕೆ.ಸಿ. ಹರಿದಾಸ್
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಡಿ.ಟಿ.ಸಿ.ಆರ್. ನಂ.159/2009–10, ದಿನಾಂಕ:31ನೇ ಮಾರ್ಚ್, 2010**

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ. | ಪುಟ್ಟಸ್ವಾಮಿ ಬಿನ್ ಶಂಕರೇಗೌಡ, ಕೆರೆಕೋಡಿಹಳ್ಳಿ, ಜಾವಗಲ್ ಹೋ: ಅರಸೀಕೆರೆ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:27.04.2009ರಂದು ರಾತ್ರಿ 10.00 ಗಂಟೆ ಸಮಯದಲ್ಲಿ ಖಚಿತ ವರ್ತಮಾನದ ಮೇರೆಗೆ ಪೊಲೀಸ್ ಉಪ ನಿರೀಕ್ಷಕರು ಗ್ರಾಮಾಂತರ ಪೊಲೀಸ್ ಠಾಣೆ, ಚಿಕ್ಕಮಗಳೂರು ಇವರು ಸಿಬ್ಬಂದಿ ಮತ್ತು ಪಂಚರೊಂದಿಗೆ ಚಿಕ್ಕಮಗಳೂರು ತಾಲ್ಲೂಕು ಲಕ್ಯಾ, ಹೋಬಳಿ, ವಡ್ಡರಹಳ್ಳಿ ಬಸ್‌ಸ್ಟಾಪ್ ಬಳಿ, ಜಾವಗಲ್–ಚಿಕ್ಕಮಗಳೂರು ಟಾರ್ ರಸ್ತೆಯಲ್ಲಿ ವಾಹನ ತಪಾಸಣೆ ಮಾಡುತ್ತಿರುವಾಗ ಜಾವಗಲ್ ಕಡೆಯಿಂದ ಬೆಳವಾಡಿ ಕಡೆಗೆ ಅತೀ ವೇಗವಾಗಿ ಮಾರುತಿ ಕಾರ್ ಬರುತ್ತಿರುವುದನ್ನು ಗಮನಿಸಿ ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಕಾರಿನ ಹಿಂಬದಿಯ ಸೀಟಿನಲ್ಲಿ ಒಟ್ಟು 15 ಬಾಕ್ಸ್‌ಗಳಲ್ಲಿ ಮದ್ಯ ತುಂಬಿದ ಬಾಟಲಿಗಳಿದ್ದು, ಅದರಲ್ಲಿ 8 ಬಾಕ್ಸ್‌ಗಳಲ್ಲಿ 180 ಮಿಲಿಯ ಓರಿಜಿನಲ್ ಚಾಯ್ಸ್ ವಿಸ್ಕಿ ಒಟ್ಟು 384 ಬಾಟಲಿಗಳು, 9 ರಿಂದ 11ನೇ ಬಾಕ್ಸ್‌ಗಳಲ್ಲಿ 180 ಮಿಲಿಯ ಓರಿಜಿನಲ್ ಚಾಯ್ಸ್ ಬ್ರಾಂಡಿಯ ಒಟ್ಟು 144 ಬಾಟಲಿಗಳು, 12 ಮತ್ತು 13ನೇ ಬಾಕ್ಸ್‌ಗಳಲ್ಲಿ 180 ಮಿಲಿಯ 96 ರಾಜಾವಿಸ್ಕಿ ಬಾಟಲಿಗಳು ಮತ್ತು 14 ಮತ್ತು 15ನೇ ಬಾಕ್ಸ್‌ಗಳಲ್ಲಿ 330 ಮಿಲಿಯ 48 ಯು.ಬಿ. ಬೀರ್ ಬಾಟಲಿಗಳಿದ್ದು, ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ಪರವಾನಗಿ ಮತ್ತು ರಹದಾರಿ ಕೇಳಲಾಗಿ ಯಾವುದೇ ಪತ್ರ ಇಲ್ಲವೆಂದು, ಚಾಲಕ ಪುಟ್ಟಸ್ವಾಮಿ ಬಿನ್ ಶಂಕರೇಗೌಡ, ಡ್ರೈವರ್ ಕೆಲಸ, ಕೆರೆಕೋಡಿಹಳ್ಳಿ, ಜಾವಗಲ್ ಅಂತ ತಿಳಿಸಿದ್ದು, ನಂತರ ಕಾರನ್ನು ಪರಿಶೀಲಿಸಲಾಗಿ ಕಾರ್ ನಂ. ಕೆಎ–03–ಎನ್–3748 ಆಗಿದ್ದು, ನಂತರ ಪಂಚರ ಸಮಕ್ಷಮ ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ವಾಹನವನ್ನು ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿಗೊಳಿಸಿ ಕ್ರೈಂ ನಂ.167/2009, ದಿನಾಂಕ:28.04.2009ರಲ್ಲಿ ಮೊಕದ್ದಮೆ ದಾಖಲು ಮಾಡಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಗೂ ಮೇಲಾದಿಕಾರಿಗಳಿಗೆ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿ ಈ ಪ್ರಾಧಿಕಾರದ ಅನುಮತಿ ಮೇರೆಗೆ ಅಬಕಾರಿ ನಿರೀಕ್ಷಕರು, ಚಿಕ್ಕಮಗಳೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯ, ಬಿಯರ್‌ಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾನಗರ, ಬೆಂಗಳೂರು (ಪೂರ್ವ) ಮತ್ತು ಚಿಕ್ಕಮಗಳೂರು ಜಿಲ್ಲೆ ಇವರಿಗೆ ದಿನಾಂಕ:08.01.2010 ಮತ್ತು 05.01.2010ರಲ್ಲಿ ಪತ್ರ ಬರೆದು, ಮುಂದುವರೆಸಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾನಗರ, ಬೆಂಗಳೂರು (ಪೂರ್ವ) ಇವರಿಂದ ಇದುವರೆವಿಗೂ ವಾಹನದ ಮಾಲೀಕತ್ವದ ವಿವರಗಳು ಬಂದಿರುವುದಿಲ್ಲ. ಪ್ರಕರಣದಲ್ಲಿನ ಆರೋಪಿಗೆ ಜಫ್ತುಪಡಿಸಿದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟೀಸ್ ಜಾರಿ ಮಾಡಲು ಕ್ರಮಕೈಗೊಂಡಿದ್ದು, ನೋಟೀಸ್ ದಿನಾಂಕ:01.03.2010ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಪ್ರಕರಣ ದಾಖಲಾಗಿ ಸುಮಾರು 11 ತಿಂಗಳು ಅವಧಿ ಕಳೆದಿದ್ದು, ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಅಲ್ಲದೆ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿದೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**ಆದೇಶ**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಪೊಲೀಸ್ ಉಪ ನಿರೀಕ್ಷಕರು, ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆ ಇವರ ಕ್ರೈಂ ನಂ.167/2009, ದಿನಾಂಕ:27.04.2009ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ:ಕೆಎ–03–ಎನ್–3748 (ಮಾರುತಿ ಕಾರ್) ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 111.780 ಲೀಟರ್ ಮದ್ಯ ಮತ್ತು 15.510 ಲೀಟರ್ ಬಿಯರ್ ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಮಾರ್ಚ್, 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–577

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಡಿ.ಟಿ.ಸಿ.ಆರ್. ನಂ.460/2008–09, ದಿನಾಂಕ:31ನೇ ಮಾರ್ಚ್, 2010**

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಅಧಿಕಾರಿಗಳು, | ರಾಮಚಂದ್ರಪ್ಪ ಬಿನ್ ಗೋವಿಂದಪ್ಪ, |
| ಕಡೂರು ಪೊಲೀಸ್ ಠಾಣೆ. | ಶ್ರೀರಾಂಪುರ, ಕಡೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:10.04.2009 ರಂದು ಖಚಿತ ವರ್ತಮಾನ ಮೇರೆಗೆ ಹೆಚ್.ಸಿ. 125 ಮತ್ತು ಪಿ.ಸಿ. 315 ಇವರು ಪಂಚರೊಂದಿಗೆ ರಾತ್ರಿ 7.30 ಗಂಟೆ ಸಮಯದಲ್ಲಿ ಕಡೂರು ತಾಲ್ಲೂಕು ಎನ್.ಹೆಚ್. ರಸ್ತೆ–206ರ ಬದಿಯಿರುವ ಶ್ರೀರಾಂಪುರ ಗ್ರಾಮದ ಗೋವಿಂದಪ್ಪ ಬಿನ್ ರಾಮಪ್ಪ ಎಂಬುವವರ ಮನೆಯ ಮುಂಭಾಗದ ರಸ್ತೆಯಲ್ಲಿ ಕಾಯುತ್ತಿರುವಾಗ ವಾಹನ ಸಂಖ್ಯೆ: ಕೆಎ–14–ಇ_8999ರ ಬಜಾಜ್‌ಸ್ಕೂಟರ್‌ನಲ್ಲಿ ಒಬ್ಬ ಆಸಾಮಿಯು ಒಂದು ಪ್ಲಾಸ್ಟಿಕ್ ಬ್ಯಾಗ್‌ನಲ್ಲಿ ಬ್ರಾಂದಿ ಸೀಸೆಗಳನ್ನು ತಂದಿದ್ದು, ತಡೆದು ನಿಲ್ಲಿಸಿ ವಾಹನವನ್ನು ಪರಿಶೀಲಿಸಿದಾಗ 180 ಎಂ.ಎಲ್.ನ 24 ಕ್ವಾರ್ಟರ್ ರಾಜಾವಿಸ್ಕಿ ಮದ್ಯದ ಬಾಟಲಿಗಳಿದ್ದು, ವಾಹನದಲ್ಲಿದ್ದ ವ್ಯಕ್ತಿ ರಾಮಚಂದ್ರಪ್ಪ ಬಿನ್ ಗೋವಿಂದಪ್ಪ, 36 ವರ್ಷ, ಭೋವಿ ಜನಾಂಗ, ಶ್ರೀರಾಂಪುರ, ಕಡೂರು ತಾಲ್ಲೂಕು ಇವರು ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ರಹದಾರಿ ಮತ್ತು ಯಾವುದೇ ಪರವಾನಗಿ ಪತ್ರ ಇಲ್ಲವೆಂದು ತಿಳಿಸಿದ್ದರಿಂದ ಅಕ್ರಮ ಮದ್ಯವೆಂದು ದೃಢಪಡಿಸಿಕೊಂಡು ಪಂಚರ ಸಮಕ್ಷಮ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಆರೋಪಿಯನ್ನು ದಸ್ತಗಿರಿ ಮಾಡಿ, ವಾಹನ ಮತ್ತು ಸ್ವತ್ತುಗಳನ್ನು ಅಮಾನತ್ತುಪಡಿಸಿಕೊಂಡು ಠಾಣೆಗೆ ಹಾಜರುಪಡಿಸಿದ ಮೇರೆಗೆ ಪೊಲೀಸ್ ಉಪ ನಿರೀಕ್ಷಕರು, ಕ್ರೈಂ 107/2009ರಲ್ಲಿ ಮೊಕದ್ದಮೆ ದಾಖಲು ಮಾಡಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿ ಈ ಪ್ರಾಧಿಕಾರದ ಅನುಮತಿ ಮೇರೆಗೆ ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಕ್ರಮವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆ ಇವರಿಗೆ ದಿನಾಂಕ:13.10.2009 ಮತ್ತು 20.02.2010ರಲ್ಲಿ ಪತ್ರ ಬರೆದು, ಮುಂದುವರೆಸಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಂದ ಇದುವರೆವಿಗೂ ವಾಹನದ ಮಾಲೀಕತ್ವದ ವಿವರಗಳು ಬಂದಿರುವುದಿಲ್ಲ. ಪ್ರಕರಣದಲ್ಲಿನ ಆರೋಪಿಗೆ ಜಪ್ತುಪಡಿಸಿದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟೀಸ್ ಜಾರಿ ಮಾಡಲು ಕ್ರಮಕೈಗೊಂಡಿದ್ದು, ನೋಟೀಸ್ ದಿನಾಂಕ:26.02.2010ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಪ್ರಕರಣ ದಾಖಲಾತಿ ಸುಮಾರು 11 ತಿಂಗಳು ಅವಧಿ ಕಳೆದಿದ್ದು, ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಪ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಅಲ್ಲದೆ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿದೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**ಆದೇಶ**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಪೊಲೀಸ್ ಉಪ ನಿರೀಕ್ಷಕರು, ಕಡೂರು ಪೊಲೀಸ್ ಠಾಣೆ ಇವರ ಕ್ರೈಂ ನಂ.107/2009, ದಿನಾಂಕ:10.04.2009ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ:ಕೆಎ–14–ಇ–8999 (ಬಜಾಜ್ ಸ್ಕೂಟರ್) ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 4.140 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 31ನೇ ಮಾರ್ಚ್, 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–578

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಗುಲಬರ್ಗಾ**

**ಸಂಖ್ಯೆ:ಎ4/ಅಗು/ಪ್ರ/ಸಾಗು/ಯಮಹಾ–ಕೆಎ–33–ಇ–2969/ಸಿ.ಆರ್./09–10/38, ದಿನಾಂಕ:6ನೇ ಏಪ್ರಿಲ್, 2010**

**ನಿರೂಪಣಾಧಿಕಾರಿ:** ಶ್ರೀ ಸಂತೋಷ ಕುಮಾರ್, ಭಾ.ಅ.ಸೇ.
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ಅರಣ್ಯ ವಿಭಾಗ, ಗುಲ್ಬರ್ಗಾ.

**ಫಿರ್ಯಾಧಿದಾರರು:** ವಲಯ ಅರಣ್ಯ ಅಧಿಕಾರಿ, ಪ್ರಾದೇಶಿಕ ವಲಯ, ಗುಲಬರ್ಗಾ.

**ಅರ್ಜಿದಾರರು:** 1) ಶ್ರೀ ರಾಮು ತಂದೆ ಛತ್ರು ಚವ್ಹಾಣ,
2) ಶ್ರೀ ಶಂಕರ ಉಮ್ಲಾ ರಾಠೋಡ.

**ಪ್ರಕರಣದ ಹಿನ್ನೆಲೆ:**

ದಿನಾಂಕ:05.08.2002 ರಂದು ಗುಲಬರ್ಗಾ ವಲಯದ ಸಿಬ್ಬಂದಿಯವರು ಅರಣ್ಯ ರಕ್ಷಕರಾದ ಶ್ರೀ ಶಮಶೋದ್ದಿನ್ ಮುಲ್ಲಾ, ಇವರುಗಳೆಲ್ಲರು ಖಚಿತ ಮಾಹಿತಿ ಮೇರೆಗೆ ನಂದಿಕೂರ ಗ್ರಾಮದಲ್ಲಿ ಪಟ್ಟಾ ಸರ್ವೆ ನಂ.13 ಜಮೀನಿನಲ್ಲಿ ಅಕ್ರಮವಾಗಿ ಶ್ರೀಗಂಧ ಮರ ಕಡತಲೆ ಮಾಡಿ ಬಸ್‌ಸ್ಟ್ಯಾಂಡ್ ಹತ್ತಿರ ದ್ವಿಚಕ್ರ ವಾಹನವನ್ನು ಪರಿಶೀಲಿಸಲಾಗಿ ಯಮಹಾ ವಾಹನವಾಗಿದ್ದು ಸಂಖ್ಯೆ:ಕೆಎ–33–ಎಫ್–2969 ಜೊತೆಗೆ ಶ್ರೀಗಂಧ ತುಂಡುಗಳು ಇದ್ದದ್ದು ಪತ್ತೆಯಾಯಿತು.

ಸದರಿ ಸ್ವತ್ತುಗಳನ್ನು ಪರಿಶೀಲಿಸಲಾಗಿ ಅವುಗಳ ಮೇಲೆ ಇಲಾಖೆ ಛಾಪಾ ಗುರುತು ಇಲ್ಲದೆ ಇರುವುದು ಕಂಡು ಬಂದಿದ್ದರಿಂದ ಅಕ್ರಮವಾಗಿ ಸಾಗಿಸುತ್ತಿರುವುದು ದೃಢಪಟ್ಟಿರುವ ಕಾರಣ ಸದರಿ ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ:19/02–03 ಕಲಂ 84, 85 & 86 ಕೆಎಫ್ ಆಕ್ಟ್ 1963 ರಡಿಯಲ್ಲಿ ದಾಖಲು ಮಾಡಿ ನ್ಯಾಯಾಲಯಕ್ಕೆ

ಮುಂದಿನ ಕ್ರಮಕ್ಕಾಗಿ ಹಾಜರುಪಡಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71–ಎ ಪ್ರಕಾರವಾಗಿ ಕ್ರಮ ಜರುಗಿಸಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶದವರೆಗೆ ವಲಯ ಅರಣ್ಯ ಅಧಿಕಾರಿ, ಗುಲಬರ್ಗಾ ಇವರ ವಶಕ್ಕೆ ನೀಡಲಾಗಿರುತ್ತದೆ. 23.02.2006 ರಿಂದ 26.12.2009 ರವರೆಗೆ ಹಲವಾರು ದಿನಾಂಕಗಳೆಂದು ಅರ್ಜಿದಾರರಿಗೆ (ಆರೋಪಿತರಿಗೆ) ಹಾಗೂ ದ್ವಿಚಕ್ರ ವಾಹನ ನೊಂದಾಯಿತ ಮಾಲೀಕರಿಗೆ ಸಮನ್ಸ್ ಜಾರಿ ಮಾಡಲಾಗಿ ಅವರಾಗಲಿ ಅವರ ಪರ ವಕೀಲರಾಗಲಿ ಯಾರೊಬ್ಬರೂ ಈ ಪ್ರಕರಣದಲ್ಲಿ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ ಸದರಿ ವಾಹನದ ದಾಖಲಾತಿಗಳನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಾದಗಿರಿಯಿಂದ ತರಿಸಿಕೊಳ್ಳಲಾಯಿತು.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ:23.02.2006 ರಿಂದ 26.12.2009ರ ವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನ ಮಾಲೀಕರ ಹೇಳಿಕೆಗಳನ್ನು Asst. Director of Public Prosecutor ಗುಲಬರ್ಗಾರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ನಡೆಸಲು ಯಾರೊಬ್ಬರೂ (ಆರೋಪಿತರ ಪರ) ಹಾಜರಾಗದೇ ಇದ್ದಿದರಿಂದ, ಸದರಿ ಪ್ರಕರಣದ ದ್ವಿಚಕ್ರ ವಾಹನದ ಬಗ್ಗೆ ಅವರಿಗೆ ಕಾಳಜಿ ಇಲ್ಲದು ಕಂಡು ಬಂದಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನು ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1. ಅರ್ಜಿದಾರರ ದ್ವಿಚಕ್ರ ವಾಹನ ಸಂಖ್ಯೆ: ಕೆಎ–33–ಎಫ್–2969ರ ಜೊತೆಗೆ ಇದ್ದ ಶ್ರೀಗಂಧ ತುಂಡುಗಳು ದಿನಾಂಕ:05.08.2002 ರಂದು ಕಾನೂನು ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ಕಾಯ್ದೆ 71(ಬಿ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತು ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಅಥವಾ ವಾಹನ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆ ಉಪಯೋಗಿಸದಂತೆ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ಪ್ರಕರಣದಲ್ಲಿ ಫಿರ್ಯಾದುದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯ್ದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?

5. ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

6. ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಒಂದನೇ ಅಂಶಕ್ಕೆ ಹೌದು ಎಂತಲೂ

2) ಎರಡನೇ ಅಂಶಕ್ಕೆ ಹೌದು ಎಂತಲೂ

3) ಮೂರನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಹಾಗೂ ಮೂರನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

4) ನಾಲ್ಕನೇ ಅಂಶಕ್ಕೆ ಹೌದು ಎಂತಲೂ

5) ಐದನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನಂತೆ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಅಂಶ–1:**

ದಿನಾಂಕ:05.08.2002 ರಂದು ಗುಲಬರ್ಗಾ ವಲಯದ ಸಿಬ್ಬಂದಿಯವರು ಗುಲಬರ್ಗಾ ಶಾಖೆಯ ಗುಲಬರ್ಗಾ ಗಸ್ತಿನ ನಂದಿಕೂರ ಗ್ರಾಮದ ಹತ್ತಿರ ವಾಹನದ ಜೊತೆಗೆ ಇದ್ದವರನ್ನು ವಿಚಾರಿಸಲಾಗಿ (1) ಶ್ರೀ ಶಂಕರ ತಂದೆ ಉಮ್ಲಾ ರಾಠೋಡ 37, (2) ನಾಗಪ್ಪ ತಂದೆ ಗೋಳೆಯಪ್ಪ, 39, (3) ರಾಮು ತಂದೆ ಛತ್ರು ಚವ್ಹಾಣ–35, ಸದರಿಯವರು ತಂದಿದ್ದ ದ್ವಿಚಕ್ರ ವಾಹನ ಪರಿಶೀಲಿಸಲಾಗಿ ಯಮಹಾ ವಾಹನ ದ್ವಿಚಕ್ರ ಅದರ ಸಂಖ್ಯೆ: ಕೆಎ–33–ಈ–2969 ಇದ್ದು (ಕೆಂಪು ಬಣ್ಣದ್ದು) ತದನಂತರ ಜೊತೆಯಲ್ಲಿದ್ದ ಶ್ರೀಗಂಧ ಕಟ್ಟಿಗೆ ತುಂಡುಗಳು ಇದ್ದದ್ದು ಕಂಡು ಬಂತು. ಸದರಿ ಸ್ವತ್ತು ವಶಪಡಿಸಿಕೊಂಡ, ವಾಹನ ಮಾಲೀಕರಾಗಲೀ, ಅಥವಾ ವಾಹನ ಉಸ್ತುವಾರಿದಾರರಾಗಲೀ, ವಾಹನದ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೆ, ಬದಲಾಗಿ ತಮಗೆ ಗೊತ್ತಿದ್ದೆ, ಈ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧ ತುಂಡುಗಳನ್ನು ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿದೆ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಸಂತೋಷ ಕುಮಾರ, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಗುಲಬರ್ಗಾ ವಿಭಾಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ದ್ವಿಚಕ್ರ ವಾಹನ ನೊಂದಣಿ ಸಂಖ್ಯೆ: ಕೆಎ–33–ಎಫ್–2969 (ಇಂಜಿನ್ ನಂ. 1L 5108460, ಚಾಸ್ಸಿ ನಂ. 97E 115108460) ಹಾಗೂ ಶ್ರೀಗಂಧ ತುಂಡುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಿದ್ದರೆ, ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನಾಂಕ:01.04.2010 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಶ್ರೀ ಸಂತೋಷ ಕುಮಾರ, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿಗಳು
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪ್ರಾದೇಶಿಕ ಅರಣ್ಯ ವಿಭಾಗ, ಗುಲಬರ್ಗಾ.

ಪಿಆರ್–620

**ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಶಿರಹಟ್ಟಿ**

**ಅಧಿಸೂಚನೆ ಸಂಖ್ಯೆ: ಸಕಾನಿಇಂ/ಪಂರಾಇಂ/ಮಾಹಅ/2008–09, ದಿನಾಂಕ:30ನೇ ಜನವರಿ, 2009**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪವಿಭಾಗ, ಶಿರಹಟ್ಟಿ, ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್–5(1)ರಡಿಯಲ್ಲಿ ಪ್ರದತ್ತವಾದ ಅದಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್–5(2) ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಹಾಗೂ ಸೆಕ್ಷನ್–19–(1)ರಡಿಯಲ್ಲಿ ಮೇಲ್ಮನವಿ ಪ್ರಾಧಿಕಾರ ಎಂದು ನೇಮಕ ಮಾಡಲಾಗಿದೆ.

**ಮಾಹಿತಿ ಹಕ್ಕು ಅಧಿನಿಯಮ, 2005 ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು**

| ಅ. ನಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್–5(1) | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ ಸೆಕ್ಷನ್–5(1) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು ಸೆಕ್ಷನ್–19(1) |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಸಹಾಯಕ ಇಂಜಿನೀಯರ್–1 ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಸಹಾಯಕ ಇಂಜಿನೀಯರವರ (ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ವಿಭಾಗ, ಗದಗ. |

**ಶ್ರೀ ಸಿ.ಎಸ್. ಜೋಶಿ**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್, ಉಪ–ವಿಭಾಗ, ಶಿರಹಟ್ಟಿ.

2005ರ ಮಾಹಿತಿ ಹಕ್ಕು ಓದಲಾದ 4(1) ಮತ್ತು 4(ಬಿ) ಪ್ರಕಾರ ಸರ್ಕಾರದ ನಿಯಮಾನುಸಾರ ಈ ಕೆಳಗಿನಂತೆ ಸಾರ್ವಜನಿಕರ ಗಮನಕ್ಕೆ ಇಡಲಾಗಿದೆ.

**ಕೈಪಿಡಿ–1:**

ಕರ್ನಾಟಕ ರಾಜ್ಯದಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ–ವಿಭಾಗದ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವಸತಿ ಗೃಹಗಳು, ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆಯ ಕೆಲಸಗಳನ್ನು ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ 01.07.1987 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಈ ಉಪವಿಭಾಗದ ವಿಸ್ತೀರ್ಣವು 949.9 ಚದರ ಕಿ.ಮೀ. ಇರುತ್ತದೆ. ಮತ್ತು 2001ರ ಜನಗಣತಿಯ ಪ್ರಕಾರ 1,83,191 ಜನಸಂಖ್ಯೆ ಇರುತ್ತದೆ. ಈ ಉಪವಿಭಾಗವು ಕಾರ್ಯನಿರ್ವಾಹಕ ಇಂಜಿನೀಯರರು, ಪಂಚಾಯತ್‌ರಾಜ್ ಇಂಜಿನೀಯರಿಂಗ್ ವಿಭಾಗ, ಗದಗ, ಅಧೀಕ್ಷಕ ಇಂಜಿನೀಯರರು, ಧಾರವಾಡ ವೃತ್ತ, ಧಾರವಾಡ ಹಾಗೂ ಮುಖ್ಯ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ಬೆಂಗಳೂರು ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ಉಪ–ವಿಭಾಗದಡಿಯಲ್ಲಿ 2006–07ನೇ ಪ್ರಕಾರ ರಸ್ತೆ, ಸೇತುವೆ ಮತ್ತು ಕಟ್ಟಡಗಳ ವಿವರ ಹಾಗೂ ಕುಡಿಯುವ ನೀರಿನ ಮಾಹಿತಿಯು ಈ ಕೆಳಗಿನಂತಿರುತ್ತದೆ.

**ಅ) ರಸ್ತೆಗಳು:**

1) ಗ್ರಾಮೀಣ ರಸ್ತೆಗಳು – 584 ಕಿ.ಮೀ.

**ಬ) ಸೇತುವೆಗಳು:**

1) ಸಣ್ಣ ಸೇತುವೆಗಳು– 70 ನಂ.

2) ಸಣ್ಣ ಮೋರಿಗಳು – 36 ನಂ.

**ಕ) ಕಟ್ಟಡಗಳು:**

1) ಮುಖ್ಯ ಕಟ್ಟಡಗಳು – 11 ನಂ.

2) ಸಣ್ಣ ಕಟ್ಟಡಗಳು – 16 ನಂ.

**ಡ) ಕುಡಿಯುವ ನೀರು:**

1) ನೀರು ಸರಬರಾಜು ಯೋಜನೆಗಳು– 65 ನಂ.

2) ಕಿರು ನೀರು ಸರಬರಾಜು ಯೋಜನೆಗಳು – 77 ನಂ.

3) ಕೈ ಪಂಪು ಕೊಳವೆ ಭಾವಿ. – 564 ನಂ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಶಿರಹಟ್ಟಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ

2) ಆಡಳಿತ ಶಾಖೆ

3) ಲೆಕ್ಕ ಶಾಖೆ

4) ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಈ ಉಪವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರ ಸಹಾಯಕ್ಕಾಗಿ ಸಹಾಯಕ ಇಂಜಿನೀಯರ್–2 ಕಿರಿಯ ಇಂಜಿನೀಯರರು–3 ಅದರಲ್ಲಿ ಸಹಾಯಕ ಇಂಜಿನೀಯರ್–2 ಹುದ್ದೆಗಳು ಹಾಗೂ ಕಿರಿಯ ಇಂಜಿನೀಯರ್–1 ಹುದ್ದೆಗಳು ಖಾಲಿ ಇರುತ್ತವೆ. ಕೆಲಸ ನಿರೀಕ್ಷಕರು–2 ಕಾರ್ಯನಿರ್ವಹಿಸುತ್ತಾರೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.

2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವುದು.

3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

4) ಎಮ್.ಎಮ್.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಿರುವುದು.

5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.

6) ತಾಲ್ಲೂಕು ಮಟ್ಟದ ಕೆ.ಡಿ.ಪಿ. ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.

7) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

**ಕೈಪಿಡಿ–2:**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಶಿರಹಟ್ಟಿ ಇವರು ಉಪವಿಭಾಗದ ಮುಖ್ಯಸ್ಥರಾಗಿದ್ದು ಇವರು ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಗದಗ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.

1) ಪ್ರತಿಯೊಂದು ಉಪ–ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಇರುತ್ತಾರೆ. ಉಪವಿಭಾಗದ ಕಾಮಗಾರಿಗಳ ಶೇ.100ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.

2) ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವುದು.

3) ಉಪವಿಭಾಗ ಸಿಬ್ಬಂದಿ ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು, ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.

4) ಉಪವಿಭಾಗದಲ್ಲಿ ಶಾಖಾಧಿಕಾರಿಗಳು ಇರುವುದಿಲ್ಲ ಅವರ ಅಧೀನದಲ್ಲಿ ಪ್ರಥಮ ದರ್ಜೆಯ ಸಹಾಯಕರು, ದ್ವಿತೀಯ ದರ್ಜೆಯ ಸಹಾಯಕರು, ಸಹಾಯಕ ಇಂಜಿನೀಯರ್, ಕಿರಿಯ ಇಂಜಿನೀಯರ್, ಬೆರಳಚ್ಚುಗಾರರು ಉಪವಿಭಾಗದ

ಕೆಲಸಗಳನ್ನು ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.

5) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಕಾರ್ಯನಿರ್ವಾಹಕ ಇಂಜಿನೀಯರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕೆಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.

6) ಕಾಮಗಾರಿಗಳ ಅಂದಾಜು ತಯಾರಿಕೆ ಕರಡು ಟೆಂಡರ್ ಪತ್ರಗಳ ತಯಾರಿಕೆ ಗುತ್ತಿಗೆದಾರರಿಗೆ ನಿವೇಶನ ಇತರೆ ಕಾಮಗಾರಿಗಳ ಮಾರ್ಕ್‌ಔಟ್ ಮಾಡುವ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಕ್ರಮ ತೆಗೆದುಕೊಳ್ಳಬೇಕಾಗಿರುತ್ತದೆ.

ಸಹಾಯಕ ಇಂಜಿನೀಯರ್/ ಕಿರಿಯ ಇಂಜಿನೀಯರವರುಗಳ ತಾಂತ್ರಿಕ ವಿಚಾರಗಳು ಶಾಖಾ ಲೆಕ್ಕಗಳು, ಟಿ ಮತ್ತು ಪಿ ಲೆಕ್ಕಗಳು, ಎಮ್.ಎ.ಎಸ್. ಲೆಕ್ಕಗಳು ಇತರೆ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವರು. ಇವರುಗಳು ಬಿಲ್ಲುತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೇ ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿದ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.

**ಕೈಪಿಡಿ–3:**

ನಿರ್ಣಯತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ.

ಲೋಕೋಪಯೋಗಿ ಲೆಕ್ಕಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತದೆ.

**ಆಡಳಿತವನ್ನು ನಿರ್ವಹಿಸಲು**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು

ಇವುಗಳನ್ನು ಅನುಸರಿಸಲಾಗುತ್ತಿದೆ.

**2. ಆಡಳಿತ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪವಿಭಾಗ, ಶಿರಹಟ್ಟಿ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 16 ಹಾಗೂ ಹೆಚ್ಚುವರಿ ಹುದ್ದೆ 1 ಹುದ್ದೆಗಳು ಇದ್ದು ಇದರಲ್ಲಿ ಮಂಜೂರಾದ ಹುದ್ದೆಯಲ್ಲಿ 12 ಹಾಗೂ ಹೆಚ್ಚುವರಿ ಹುದ್ದೆಗಳಲ್ಲಿ 1 ಜನ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ–1 ವರ್ಗ ಬಿ–3 ವರ್ಗ ಸಿ–2 ವರ್ಗ ಡಿ–1 ಮಂಜೂರಾದ ಹುದ್ದೆಗಳಿದ್ದರೆ ಹೆಚ್ಚುವರಿ ಹುದ್ದೆಯಲ್ಲಿ 1 ಕೆಲಸ ನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ 2 ಜನ ದ್ವಿತೀಯ ದರ್ಜೆ ಸಹಾಯಕರು, ಕಾರ್ಯನಿರ್ವಹಿಸುತ್ತಿದ್ದು ಒಬ್ಬರು ಉಗ್ರಾಣ ಶಾಖೆ ಹಾಗೂ ಒಬ್ಬರು ಎರವಲು ಸೇವೆಯ ಮೇಲೆ ವಿಭಾಗ ಕಛೇರಿ ಗದಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಮೆಕ್ಯಾನಿಕ್ ಹುದ್ದೆಯ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಸಿಬ್ಬಂದಿ ವೇತನ ಬಿಲ್ಲು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲು ಹಾಗೂ ಸದರಿ ನೌಕರರ ರಜೆ ಇತ್ಯಾದಿಗಳ ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕೆಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಹಾಗೂ ಐ.ಸಿ.ಎಮ್. ಹುದ್ದೆಯ ಒಬ್ಬರು ಎರವಲು ಸೇವೆಯ ಮೇಲೆ ತಾಲ್ಲೂಕು ಪಂಚಾಯತ್ ಶಿರಹಟ್ಟಿಯಲ್ಲಿ

ಕಾರ್ಯನಿರ್ವಹಿಸುತ್ತಿದ್ದಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1) ಆಡಳಿತ ಶಾಖೆಯ ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗ್ಯೆರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವುದು ಮತ್ತು ನಿರ್ವಹಿಸುವುದು.

2) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ದಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗ್ಯೆರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.

3) ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆ ಸಲ್ಲಿಸುವುದು.

4) ಆಡಳಿತಕ್ಕೆ ಸಂಬಂಧಿಸಿದಂತೆ ಉಪವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ದಪಡಿಸುವುದು.

5) ಕಛೇರಿಗೆ ಬರುವ ಹಾಗೂ ಕಛೇರಿಯಿಂದ ಹೋಗುವ ಪತ್ರಗಳ ಸ್ವೀಕೃತಿ ಮತ್ತು ರವಾನೆ ಕಾರ್ಯದೊಂದಿಗೆ ವಿಭಾಗ ಕಛೇರಿಯಿಂದ ನೀಡುವ ಅಳತೆ ಪುಸ್ತಕಗಳು, ನಾಮಾಂಕಿತ ಸಮುದಾಯ ಹಾಜರಾತಿ ಪಟ್ಟಿ ಇವುಗಳ ದಾಖಲೆಗಳ ನಿರ್ವಹಣೆ ಹಾಗೂ ಅಂಚೆ ಚೀಟಿಗಳ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ. ಇದರೊಂದಿಗೆ ವಾರ್ಷಿಕ ತಪಾಸಣಾ ವರದಿಗಳಿಗೆ ಪಾಲನಾ ವರದಿಯನ್ನು ಕ್ರೋಢಿಕರಿಸಿ ಸಲ್ಲಿಸುವ ಕಾರ್ಯನಿರ್ವಹಿಸುತ್ತಾರೆ.

**3. ಲೆಕ್ಕ ಪತ್ರ ಶಾಖೆ:**

ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಉಪವಿಭಾಗಕ್ಕೆ ಸಂಬಂಧಪಟ್ಟಂತೆ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು ಹಣ ಭರವಸೆ ಪತ್ರ ಬೇಡಿಕೆ ಪತ್ರ ಸಲ್ಲಿಸುವುದು ಇದಲ್ಲದೆ ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಎಲ್ಲ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

**4. ಉಗ್ರಾಣ ಶಾಖೆ:**

ಈ ಇಲಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆಯ ಸಹಾಯಕರು ಈ ಕೆಲಸವನ್ನು ನಿರ್ವಹಿಸುತ್ತಾರೆ. ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವುದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವುದು, ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವುದು. ಉಗ್ರಾಣಕ್ಕೆ ಸಂಬಂಧಪಟ್ಟ ಲೆಕ್ಕಪತ್ರ ಮಾಹಿತಿಯನ್ನು ವಿಭಾಗ ಕಛೇರಿಗೆ ಸಲ್ಲಿಸುವುದು.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ್ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ ಕಿರಿಯ ಇಂಜಿನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು, ಮತ್ತು ಮುಖ್ಯ ಇಂಜಿನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು 2 ವರ್ಷಕ್ಕೊಮ್ಮೆ ಸಂಬಂಧಿತ ಉಪವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜಿನೀಯರವರ ಕಛೇರಿ ಅಧೀಕ್ಷಕ ಇಂಜಿನೀಯರವರ ಕಛೇರಿ, ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿಯಿಂದಲೂ ಉಪವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ

ಅರ್ಜಿಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡಾ ನಿವೇಶನವನ್ನು ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4:**

ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಅಧಿಕಾರ ಪ್ರತ್ಯಾಯೋಜನೆ ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂ–1/ಎಫ್.ಸಿ.ಆರ್.93/ ಬೆಂಗಳೂರು ದಿನಾಂಕ:15.12.1994.

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:ಎಫ್.ಡಿ.1/ಟಿ.ಎಫ್.ಪಿ.2001 ಬೆಂಗಳೂರು ದಿನಾಂಕ:02.02.2001.

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ.

**ಕೈಪಿಡಿ–5:**

ಇಲಾಖೆ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು ದಾಖಲೆಗಳು ಕೈಪಿಡಿಗಳ ವಿವರ.

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು, ಮತ್ತು ಸೂಚನೆಗಳು

ಕರ್ನಾಟಕ ನಾಗರೀಕ ಸೇವಾ ನಿಯಮಗಳು

ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು ನಿಯಮಗಳು)

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆ 1996

ಕರ್ನಾಟಕ ನೀರಾವರಿ ಕಾಯ್ದೆ 1965

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

**ಕೈಪಿಡಿ–6:**

ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಖ್ತೆ:

**ತಾಂತ್ರಿಕ ಶಾಖೆ:**

1) ಕಾರ್ಯನಿರ್ವಾಹಕ ಇಂಜಿನೀಯರವರ, ಅಧೀಕ್ಷಕ ಇಂಜಿನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.

2) ಪ್ರಗತಿ ವರದಿಗಳು

3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ

5) ಪಿ.ಆರ್.ಇ.ಡಿ. ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟಗಳ ವಹಿ

6) ದರ ಸೂಚಕ

7) ಆಯವ್ಯಯ ಕಾಮಗಾರಿಗಳ ವಹಿ

8) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ.

**ಪಿ.ಬಿ. ಯಲ್ಲಿರುವ ರಿಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಜಿಸ್ಟರ್

2) ಸೇತುವೆಗಳ ರಜಿಸ್ಟರ್

3) ಕಟ್ಟಡಗಳ ರಜಿಸ್ಟರ್

4) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಜಿಸ್ಟಾರ್

**ದಾಖಲೆಗಳು: ಆಡಳಿತ ಶಾಖೆ:**

ಉಪವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1) ಹಾಜರಾತಿ ಪಟ್ಟಿ

2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ಮತ್ತು ಸಾಂದರ್ಭಿಕ ರಜೆ ಕಡತ, ಅರ್ಜಿಗಳೊಂದಿಗೆ

3) ಸಂಘಟನೆ

4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಃಖ್ತೆ

5) ಕೆಲಸ ವಿತರಣಾ ತಃಖ್ತೆ

6) ವೇತನ ಬಡ್ತಿ ನಿಗಾವಹಿ

7) ವೇತನ ಬಡ್ತಿಯ ಮಂಜೂರಾತಿ ವಹಿ

8) ಇನಕಂಬೆಸ್ಸಿ ವಹಿ

9) ರಹಸ್ಯ ವರದಿಗಳ ವಹಿ

10) ಆಸ್ತಿ ಮತ್ತು ದಾಜಿಜತ್ವ ತಃಖ್ತೆ ವಹಿ

11) ಮಹಾಲೇಖಪಾಲಕರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾವಹಿ

12) ಸೇವಾ ವಹಿ

13) ಇಲಾಖಾ ಪರೀಕ್ಷೆಗಳ ನಿಗಾ ವಹಿ

14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ

15) ಕಛೇರಿ ನೌಕರರ ಮನೆಗಳ ವಿಳಾಸ

16) ವಿಧಾನಸಭೆ/ ಪರಿಷತ್ ಪ್ರಶ್ನೆಗಳ ವಹಿ

17) ವೈಯಕ್ತಿಕ ವಹಿ

18) ಪ್ರತಿ ಮಾಹೆಗಳ ಬಾಕಿ ಪಟ್ಟಿ

19) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಃಖ್ತೆ

20) ಸಾಮಾನ್ಯ ಸ್ವೀಕೃತಿ

21) ರವಾನೆ ವಹಿ

22) ಸ್ಥಳೀಯ ವಿತರಣಾ ರವಾನೆ

23) ಕಛೇರಿ ಆದೇಶ ಪುಸ್ತಕ

24) ಸಾಮಾನ್ಯ ನಗದು ಪುಸ್ತಕ

25) ವೇತನ ಬಟವಾಡೆ ವಹಿ

26) ಪ್ರಯಾಣ ಭತ್ಯೆ ಬಟವಾಡೆ ವಹಿ

27) ಸಾದಿಲ್ವಾರು ವೆಚ್ಚ ವಹಿ ವೋಚರ್‌ಗಳ ಸಂಹಿತೆ

**ಲೆಕ್ಕಪತ್ರ ಶಾಖೆ:**

1) ನಗದು ಪುಸ್ತಕ
2) ಚೆಕ್‌ಮೆಮೋ ಪುಸ್ತಕ
3) ಎಲ್.ಓ.ಸಿ. ರಜಿಸ್ಟರ್
4) ರಮಿಟನ್ಸ್ ರಜಿಸ್ಟರ್
5) ಚೆಕ್ ರಿಸೀವರ್ ರಜಿಸ್ಟರ್
6) ಎಸ್.ಬಿ.ಆರ್. ರಜಿಸ್ಟರ್
7) ಖಾಲಿ ಅಳತೆ ಪುಸ್ತಕಗಳ ವಹಿ
8) ಎಂ.ಪಿ.ಡಬ್ಲ್ಯೂ. ರಜಿಸ್ಟರ್
9) ಟಿ.ಇ.ಓ. ರಜಿಸ್ಟರ್
10) ವರ್ಕ್ಸ್ ರಜಿಸ್ಟರ್
11) ನಮೂನೆ–81
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ

**ಉಗ್ರಾಣ ಶಾಖೆ:**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)
2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯೂಎ–4)
3) ದಾಸ್ತಾನು ಖರೀದಿ ಪುಸ್ತಕ
4) ಅರ್ಧವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯೂಎ–15)
5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ ಬ್ಯಾರೆಲ್‌ಗಳ ವಹಿ ( ಎಸ್.ಎಂ.ಜಿ–7)
6) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯೂಎ–28)
7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ
8) ಕಛೇರಿ ಪೀಠೋಪಕರಣಗಳ ವಹಿ (ಕೆ.ಎಫ್.ಸಿ.34ಎ)
9) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)
10) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯೂಎ–4)
11) ಸೆಪ್ಟೆಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂಎ–17)
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂಎ–17) ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

–ಏನೂ ಇರುವುದಿಲ್ಲ–

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ/ ಪರಿಷತ್ತು/ ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

–ಏನೂ ಇರುವುದಿಲ್ಲ–

**ಕೈಪಿಡಿ–9**

ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಹಾಗೂ ಕಿರಿಯ ಇಂಜಿನೀಯರ್ ಇವರ ಅಧಿಕಾರದ ಬಗ್ಗೆ. ಕೈಪಿಡಿ–2ರಲ್ಲಿ ಈಗಾಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.**

| ಅ.ನಂ. | ಹುದ್ದೆ | ಹೆಸರು |
|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಸಿ.ಎಸ್. ಜೋಶಿ |
| 2. | ಸಹಾಯಕ ಇಂಜಿನೀಯರ–2 | ಖಾಲಿ ಇವೆ |
| 3. | ಕಿರಿಯ ಇಂಜಿನೀಯರ್–3 | ಶ್ರೀ ಎಮ್.ಎಸ್.ಅಕ್ಕೂರ<br>ಶ್ರೀ ಬಿ.ಆರ್. ದೇಶಪಾಂಡೆ<br>1 ಹುದ್ದೆ ಖಾಲಿ ಇದೆ |
| 4. | ಪ್ರಥಮ ದರ್ಜೆಯ ಸಹಾಯಕರು–1 | ಶ್ರೀ ಎಚ್. ಚನ್ನಬಸಪ್ಪ |
| 5. | ದ್ವಿತೀಯ ದರ್ಜೆ ಸಹಾಯಕರು–2 | ಶ್ರೀ ಕೆ.ಆರ್. ಕುಲಕರ್ಣಿ<br>ಶ್ರೀ ಯು.ಎಫ್. ಬಿನ್ನಾಳ |
| 6. | ಮೆಕ್ಯಾನಿಕ್ | ಶ್ರೀ ಎ.ಡಿ. ಢಾಲಯತ್ |
| 7. | ಐ.ಸಿ.ಎಮ್. | ಶ್ರೀ ಎಸ್.ಎಫ್. ಮುತ್ತಲಗೇರಿ |
| 8. | ಕಾರ್ಯನಿರೀಕ್ಷಕರು | ಶ್ರೀ ಎಸ್.ಎಸ್. ಮಳ್ಳಣ್ಣವರ<br>ಶ್ರೀ ಎ.ವ್ಹಿ. ತಿಮ್ಮರಡ್ಡೇರ |
| 9. | ವಾಹನ ಚಾಲಕರು | ಶ್ರೀ ಆರ್. ನಿಂಗಪ್ಪ |
| 10. | ಜವಾನರು | ಶ್ರೀ ಜಿ.ಎಸ್. ಮೂಡಲಅಂಗಡಿ<br>1 ಹುದ್ದೆ ಖಾಲಿ ಇದೆ. |

**ಹೆಚ್ಚುವರಿ ಹುದ್ದೆ:**

| ಅ.ನಂ. | ಹುದ್ದೆ | ಹೆಸರು |
|---|---|---|
| 1. | ಕಾರ್ಯನಿರೀಕ್ಷಕ | ಶ್ರೀ ಎಮ್.ಎಚ್. ತಿಪ್ಪರಡ್ಡಿ |

**ಕೈಪಿಡಿ–10**

ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗಿದೆ.

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ | ಶ್ರೀ ಸಿ.ಎಸ್. ಜೋಶಿ | 11400–21600 | 16000 |
| 2. | ಸಹಾಯಕ ಇಂಜಿನೀಯರ್ | ಖಾಲಿ ಇವೆ | – | – |
| 3. | ಕಿರಿಯ ಇಂಜಿನೀಯರ್ | ಶ್ರೀ ಎಮ್.ಎಸ್.ಅಕ್ಕೂರ<br>2 ಹುದ್ದೆ ಖಾಲಿ ಇದೆ | 8825–16000 | 10250 |
| 4. | ಪ್ರಥಮ ದರ್ಜೆಯ ಸಹಾಯಕರು | ಶ್ರೀ ಎಚ್. ಚನ್ನಬಸಪ್ಪ | 7275–13350 | 10800 |

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 5. | ದ್ವಿತೀಯ ದರ್ಜೆ ಸಹಾಯಕರು | ಶ್ರೀ ಕೆ.ಆರ್. ಕುಲಕರ್ಣಿ<br>ಶ್ರೀ ಯು.ಎಫ್. ಬಿನ್ನಾಳ | 5800–10500<br>5800–10500 | 10800<br>7625 |
| 6. | ಮೆಕ್ಯಾನಿಕ್ | ಶ್ರೀ ಎ.ಡಿ. ಢಾಲಯತ್ | 5800–10500 | 9500 |
| 7. | ಐ.ಸಿ.ಎಮ್. | ಶ್ರೀ ಎಸ್.ಎಫ್. ಮುತ್ತಲಗೇರಿ | 5800–10500 | 12000 |
| 8. | ಕಾರ್ಯನಿರೀಕ್ಷಕರು | ಶ್ರೀ ಎಸ್.ಎಸ್. ಮಳ್ಳಣ್ಣವರ<br>ಶ್ರೀ ಎ.ವ್ಹಿ. ತಿಮ್ಮರಡ್ಡೇರ | 5800–10500<br>5800–10500 | 9500<br>9500 |
| 9. | ವಾಹನ ಚಾಲಕರು | ಶ್ರೀ ಆರ್. ನಿಂಗಪ್ಪ | 5800–10500 | 13000 |
| 10. | ಜವಾನರು | ಶ್ರೀ ಜಿ.ಎಸ್. ಮೂಡಲಅಂಗಡಿ | 4800–7275 | 6000 |

**ಹೆಚ್ಚುವರಿ ಹುದ್ದೆ:**

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಕಾರ್ಯನಿರೀಕ್ಷಕ | ಶ್ರೀ ಎಮ್.ಎಚ್. ತಿಪ್ಪರಡ್ಡಿ | 5800–10500 | 10500 |

**ಕೈಪಿಡಿ–11**

| ಅ. ನಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1. | 4215–01–102–9–04–132–ನಲ್ಲಿ ನೀರು ಸರಬರಾಜು ಯೋಜನೆ (ಕೇಂದ್ರ ವಲಯ) | 56.55 | 24.90 | 45.35 | 52.12 | 31.94 | 11.90 |
| 2. | 4215–01–102–9–04–132 ನಲ್ಲಿ ನೀರು ಸರಬರಾಜು ಯೋಜನೆ (ಕೇಂದ್ರ ವಲಯ ಸಾಮಾನ್ಯ ಹೆಚ್ಚಿಸುವುದು) | 7.05 | 5.90 | 64.50 | 19.79 | 86.49 | 35.24 |
| 3. | 4215–01–102–9–01–132 ನಲ್ಲಿ ನೀರು ಸರಬರಾಜು ಯೋಜನೆ (ರಾಜ್ಯ ವಲಯ ಸಾಮಾನ್ಯ ಹೆಚ್ಚಿಸುವುದು) | 13.08 | 12.62 | 12.75 | 10.35 | 10.00 | 11.22 |
| 4. | ಕಿರು ನೀರು ಸರಬರಾಜು ಯೋಜನೆ (ಕೇಂದ್ರ ವಲಯ ಸಾಮಾನ್ಯ) | 37.01 | 43.06 | – | – | 15.57 | 15.57 |
| 5. | 4215–01–102–9–01–132 ನಲ್ಲಿ ನೀರು ಸರಬರಾಜು ಯೋಜನೆ (ರಾಜ್ಯ ವಲಯ) | 13.06 | 12.01 | 13.94 | 12.57 | 38.83 | 32.09 |
| 6. | 4215–01–102–9–01 ನಲ್ಲಿ ನೀರು ಸರಬರಾಜು (ರಾಜ್ಯ ವಲಯ ಸಾಮಾನ್ಯ ಹೆಚ್ಚಿಸುವುದು) | 4.65 | 4.65 | 28.10 | 20.96 | 174.53 | 180.27 |
| 7. | 4215–01–102–02–71 MWS ಸಾಮಾನ್ಯ ಕಾಮಗಾರಿ | 11.85 | 11.85 | 5.94 | 13.30 | | |

| ಅ. ನಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 8. | ಕೊಳವೆ ಭಾವಿ ಕೊರೆಯುವುದು | 10.00 | – | – | – | 0.86 | 15.77 |
| 9. | ಹೈಡ್ರೋಪ್ರಾಕ್ಚರ್ | – | – | – | – | 213.36 | 205.28 |
| 10. | ನೀರು ಸರಬರಾಜು ಯೋಜನೆ (ಕೇಂದ್ರ ವಲಯ ಸಾಮಾನ್ಯ ವಿಶೇಷ ಘಟಕ) | 7.42 | 8.00 | – | – | 24.00 | – |
| 11. | ನೀರು ಸರಬರಾಜು ಯೋಜನೆ (ಕೇಂದ್ರ ವಲಯ ಸಾಮಾನ್ಯ ಹೆಚ್ಚಿಸುವುದು) | – | – | – | – | 65.78 | 46.07 |
| 12. | ಶಾಲೆಗಳಿಗೆ ಕು.ನೀ. ಸರಬರಾಜು ಯೋಜನೆ (ರೂ.2.40) | 2.40 | 2.40 | – | – | 103.22 | 97.22 |
| 13. | 12ನೇ ಹಣಕಾಸು ಆಯೋಗದ ಕಟ್ಟಡ ನಿರ್ವಹಣೆ | – | – | – | 5.38 | – | – |
| 14. | 12ನೇ ಹಣಕಾಸು ಆಯೋಗದ ಕಟ್ಟಡ ನಿರ್ವಹಣೆ (2059) (60%) | 10.80 | – | 9.40 | 4.05 | – | – |
| 15. | 12ನೇ ಹಣಕಾಸು ಆಯೋಗದ (2515) | 10.80 | – | 9.04 | 4.05 | – | – |
| 16. | 4702–ವಿಶೇಷ ಅಭಿವೃದ್ಧಿ ಯೋಜನೆಯಡಿ ಸಣ್ಣ ನೀರಾವರಿ ಕೆರೆಗಳು | – | – | – | – | 28.00 | 22.74 |
| 17. | ಮುಖ್ಯಮಂತ್ರಿ ಗ್ರಾಮೀಣ ರಸ್ತೆಗಳ ನಿರ್ವಹಣೆ ಪ್ಯಾಕೇಜ್ ನಂ.–1 | – | – | – | – | 10.90 | 0.08 |
| 18. | ಮುಖ್ಯಮಂತ್ರಿ ಗ್ರಾಮೀಣ ರಸ್ತೆಗಳ ನಿರ್ವಹಣೆ ಪ್ಯಾಕೇಜ್ ನಂ.2 | – | – | – | – | 11.90 | – |
| 19. | ಮುಖ್ಯಮಂತ್ರಿ ಗ್ರಾಮೀಣ ರಸ್ತೆಗಳ ನಿರ್ವಹಣೆ ಪ್ಯಾಕೇಜ್ ನಂ.3 | – | – | – | – | 10.37 | 5.00 |
| 20. | ಮುಖ್ಯಮಂತ್ರಿ ಗ್ರಾಮೀಣ ರಸ್ತೆಗಳ ನಿರ್ವಹಣೆ ಪ್ಯಾಕೇಜ್ ನಂ.4 | – | – | – | – | 13.00 | 8.97 |
| 21. | ಮುಖ್ಯಮಂತ್ರಿ ಗ್ರಾಮೀಣ ರಸ್ತೆಗಳ ನಿರ್ವಹಣೆ ಪ್ಯಾಕೇಜ್ ನಂ.5 | – | – | – | – | 11.20 | – |
| 22. | 12ನೇ ಹಣಕಾಸು ಪ್ಯಾಕೇಜ್ 1 (TSP) | – | – | 10.30 | 11.74 | 10.40 | – |
| 23. | 12ನೇ ಹಣಕಾಸು ಪ್ಯಾಕೇಜ್ 2 (TSP) | – | – | 14.61 | 17.98 | 10.06 | – |
| 24. | 12ನೇ ಹಣಕಾಸು ಪ್ಯಾಕೇಜ್ 3 (SCP) | – | – | 12.80 | 16.35 | 11.70 | – |
| 25. | 12ನೇ ಹಣಕಾಸು ಪ್ಯಾಕೇಜ್ 4 | – | – | 15.50 | – | 11.60 | – |
| 26. | 12ನೇ ಹಣಕಾಸು ಪ್ಯಾಕೇಜ್ 5 | – | – | – | – | 11.50 | – |
| 27. | 2702–01–101–72 ಸಣ್ಣ ನೀರಾವರಿ ಯೋಜನೆ | 20.35 | 18.79 | – | – | 29.98 | 19.57 |

| ಅ. ನಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 28. | ಸ್ವಚ್ಛ ಗ್ರಾಮ ಯೋಜನೆ | – | – | – | – | 275.40 | – |
| 29. | ಜಿಲ್ಲಾ ಪಂಚಾಯತ್ ಅಭಿವೃದ್ಧಿ ನಿಧಿ | – | – | – | – | 4.30 | 2.32 |
| 30. | 2202–01–053–0–01–200 ಯೋಜನೇತರ ಶಾಲಾ ಕಟ್ಟಡ ನಿರ್ವಹಣೆ | – | – | – | 4.79 | 9.20 | 6.07 |
| 31. | 2202–02–800–1–05–10 ಪ್ರೌಢ ಶಾಲಾ ಕಟ್ಟಡಗಳು RIDF-12 ನಬಾರ್ಡ್ | – | 17.70 | – | 6.96 | – | – |
| 32. | 2202–01–203–1–04–132 ನಬಾರ್ಡ್ RIDF-XI ಸರ್ಕಾರಿ ಪದವಿ ಪೂರ್ವ ಕಾಲೇಜ್ | – | – | – | 9.47 | 88.96 | 10.39 |
| 33. | 2202–02–800–1–10 ಸರ್ಕಾರಿ ಪ್ರೌಢಶಾಲೆ ಕಟ್ಟಡ ನಿರ್ಮಾಣ ನಬಾರ್ಡ್ RIDF-XIII | 3.00 | 2.98 | – | 4.79 | 9.20 | 6.07 |
| 34. | 2202–02–109–0–77 ಸರ್ಕಾರಿ ಪ್ರೌಢಶಾಲೆಗಳ ಸೇರ್ಪಡೆ ಮಾರ್ಪಾಡು | – | 0.80 | – | 2.13 | – | 5.18 |
| 35. | 2210–03–101–0–73 ಆರೋಗ್ಯ ಇಲಾಖೆ ಕಟ್ಟಡ ನಿರ್ವಹಣೆ | 3.60 | 3.72 | – | 9.30 | 23.69 | 8.33 |
| 36. | 2210–03–110–0–06 RIDF-XI | 34.50 | 9.91 | – | 15.00 | – | – |
| 37. | 2225–03–800–0–53 ಕಟ್ಟಡಗಳ ವೆಚ್ಚ ನಿರ್ವಹಣೆ | – | – | – | 0.70 | – | 2.48 |
| 38. | 2225–01–277–0–24 ನಿವಾಸಿ ಶಾಲೆಗಳು | 5.41 | 5.40 | – | 0.72 | 1.80 | 0.72 |
| 39. | 4403–00–101–02 ನಬಾರ್ಡ್ RIDF ಪಶುವೈದ್ಯಕೀಯ ಕಟ್ಟಡಗಳು | – | – | – | 2.37 | 11.875 | 0.55 |
| 40. | 2403–00–101–0–61 ಕಟ್ಟಡಗಳು | – | – | – | 3.94 | – | 2.28 |
| 41. | 3475–00–107–0–23 ಮಾರುಕಟ್ಟೆ ಮೂಲಭೂತ ಸೌಕರ್ಯ | – | – | – | – | 18.99 | – |
| 42. | 5054–04–337–7–01 ರಸ್ತೆ ಕಾಮಗಾರಿಗಳು | – | – | – | – | 2.84 | 7.52 |
| 43. | 5054–04–800–3–03 | – | – | – | – | 57.58 | 64.72 |
| 44. | 5054 ಪ್ಯಾಕೇಜ್ ನಂ.1 | – | – | – | – | 7.66 | 8.05 |
| 45. | 5054 ಪ್ಯಾಕೇಜ್ ನಂ.2 | – | – | – | – | 7.00 | 8.00 |
| 46. | 4215–01–102–9–01–132 ರಾಜ್ಯವಲಯ ಕನಿಷ್ಠ ಅವಶ್ಯಕತೆ ಕಾರ್ಯಕ್ರಮ MNP | 15.60 | 15.29 | 6.20 | – | – | – |
| 47. | ರಾಜೀವಗಾಂಧಿ ರಾಷ್ಟ್ರೀಯ ಕುಡಿಯುವ ನೀರಿನ ಕೇಂದ್ರ ಪುರಸ್ಕೃತ ಗ್ರಾಮೀಣ ನೀರು ಸರಬರಾಜು ಯೋಜನೆ | – | – | 7.00 | – | – | – |

| ಅ. ನಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 48. | ಅಂತರ್ಜಲ ಅಭಿವೃದ್ಧಿ ಯೋಜನೆ | 5.25 | – | 5.25 | – | – | – |
| 49. | ಸುವರ್ಣಜಲ ಯೋಜನೆ (ಮಳೆ ನೀರು ಕೋಯ್ಲು) | 4.10 | 3.79 | 2.05 | – | – | – |
| 50. | ರಾಜ್ಯ ವಲಯದ ಅತಿವೃಷ್ಟಿ ಅನಾವೃಷ್ಟಿಗೊಳಗಾದ ಗ್ರಾಮೀಣ ವಸತಿಗಳಿಗೆ ಸಮರ್ಪಕ ಕು.ನೀ.ಸ.ಯೋ. | – | – | 8.30 | – | – | – |
| 51. | 11ನೇ ಹಣಕಾಸು ಆಯೋಗ | – | – | 3.78 | 3.60 | – | – |
| 52. | ಅತಿವೃಷ್ಟಿಯಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆ ದುರಸ್ತಿ | 5.00 | – | 11.24 | 0.94 | – | – |
| 53. | 2205–00–102–1–01 ಗ್ರಾಮ ಪಂಚಾಯಿತಿ ಗ್ರಂಥಾಲಯ ಕಟ್ಟಡ ನಬಾರ್ಡ್ | 4.04 | 2.38 | – | 0.93 | – | – |
| 54. | 2205–00–102–1–01 ಬಯಲು ಪ್ರದರ್ಶನ ಮಂದಿರ | 0.50 | 0.50 | – | 0.50 | – | – |
| 55. | 12ನೇ ಹಣಕಾಸು SCP | – | – | 5.05 | – | – | – |
| 56. | 2225–01–277–0–02 ಪ.ಜಾತಿ/ ಪ.ವರ್ಗಗಳ ವಿದ್ಯಾರ್ಥಿನಿಲಯ ಕಟ್ಟಡ | 5.27 | – | 10.00 | 8.56 | – | – |
| 57. | 3054 1/3 | – | – | 21.68 | 21.68 | – | – |
| 58. | 3054 CMGSY ಹೆಚ್ಚುವರಿ ನಿಧಿ | 10.00 | 1.00 | – | – | – | – |
| 59. | 3054 CMGSY 60% | 43.51 | 43.51 | 21.68 | 21.68 | – | – |
| 60. | ಟಾಸ್ಕ್‌ಫೋರ್ಸ್ 1ನೇ ಹಂತ | 6.67 | 3.72 | – | – | – | – |
| 61. | ಟಾಸ್ಕ್‌ಫೋರ್ಸ್ 2ನೇ ಹಂತ | 8.785 | – | – | – | – | – |
| 62. | 2401–00–119–4–71 ತೋಟಗಾರಿಕೆ ಮೂಲಭೂತ ಸೌಕರ್ಯ (ರೂ.2.00) | 2.00 | 2.00 | – | – | – | – |
| 63. | 2210–0–110–0–00 RIDF ಕಟ್ಟಡ ಕಾರ್ಯ ಜಿ.ಪಂ | 34.50 | 9.91 | – | 15.00 | – | – |
| 64. | ವಸತಿ ಗೃಹಗಳು | 1.56 | 1.18 | – | 1.56 | – | – |
| 65. | 2225–03–800–0–53 ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ | 2.60 | 2.23 | – | 0.70 | – | 2.48 |
| 66. | ಸುವರ್ಣ ಗ್ರಾಮೋದಯ ಯೋಜನೆಯ ಕಾಮಗಾರಿಗಳ ವಿವರ | – | – | – | – | 275.40 | 275.40 |
| 67. | 8448– ನೆಲವಾಗಲು ಸ್ಥಳಾಂತರ ಅನುದಾನ 245 MNP (ರೂ.17.66) | 15.60 | 15.29 | – | – | – | – |

| ಅ. ನಂ. | ಲೆಕ್ಕ ಶೀರ್ಷಿಕೆ | 2006–07 | | 2007–08 | | 2008–09 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 68. | RIDF ನಬಾರ್ಡ್ | 19.92 | 19.92 | – | – | – | – |
| 69. | 12ನೇ ಹಣಕಾಸು ಆಯೋಗದ ರಸ್ತೆ ಮತ್ತು ಸೇತುವೆಗಳ ನಿರ್ವಹಣೆ | 78.88 | 45.77 | 6.50 | 3.75 | – | – |
| 70. | 12ನೇ ಹಣಕಾಸು ಆಯೋಗದಡಿ ರಂಗ ಮಂದಿರ | 10.40 | 0.46 | – | 9.20 | – | 7.49 |
| 71. | 2210–03–110–0–06 RIDF ಕಟ್ಟಡ ಜಿ.ಪಂ. ಕಾರ್ಯಕ್ರಮ | 34.50 | 9.91 | – | 15.00 | – | – |
| 72. | S.G.R.Y. ಕಾಮಗಾರಿಗಳು | 17.01 | 17.26 | – | – | – | – |
| 73. | S.G.R.Y. ಶೇ.20 SC-ST ವೈಯಕ್ತಿಕ ಕಾಮಗಾರಿಗಳು | 1.09 | 1.09 | – | – | – | – |
| 74. | ಶಾಸಕರ ಪ್ರದೇಶಾಭಿವೃದ್ಧಿ ಯೋಜನೆ ಕಾಮಗಾರಿ (ಶ್ರೀ ಜಿ.ಎಸ್. ಗಡ್ಡದೇವರಮಠ) | 25.50 | 12.00 | 19.15 | – | 55.69 | 21.08 |
| 75. | ಲೋಕಸಭಾ ಸದಸ್ಯರ ಸೂಚಿಸಿದ ಕಾಮಗಾರಿಗಳ (ಶ್ರೀ ಮಂಜುನಾಥ ಕುನ್ನೂರು) | 4.95 | 5.00 | 31.26 | 18.75 | 34.39 | 0.40 |
| 76. | ರಾಜ್ಯಸಭಾ ಸದಸ್ಯರ ಸೂಚಿಸಿದ ಕಾಮಗಾರಿಗಳ (ಶ್ರೀ ಎಸ್.ಆರ್. ಬೋಮ್ಮಾಯಿ) | 6.375 | 5.375 | 10.13 | 3.99 | 10.38 | 0.57 |
| 77. | ರಾಜ್ಯಸಭಾ ಸದಸ್ಯರ ಸೂಚಿಸಿದ ಕಾಮಗಾರಿಗಳ (ಶ್ರೀ ಎಮ್.ವ್ಹಿ. ರಾಜಶೇಖರನ್) | – | – | – | – | 2.50 | – |
| 78. | ವಿಧಾನ ಪರಿಷತ್ತು ಸದಸ್ಯರ ಸೂಚಿಸಿದ ಕಾಮಗಾರಿಗಳು (ಶ್ರೀ ಎ.ಎಮ್. ಹಿಂಡಸಗೇರಿ) | – | – | 4.10 | 1.00 | 4.10 | 2.98 |
| 79. | ವಿಧಾನ ಪರಿಷತ್ತ ಸದಸ್ಯರ ಸೂಚಿಸಿದ ಕಾಮಗಾರಿಗಳು (ಶ್ರೀ ಬಸವರಾಜ ಬೊಮ್ಮಾಯಿ) | – | – | 7.00 | 4.98 | 7.00 | – |
| 80. | ವಿಧಾನ ಪರಿಷತ್ತ ಸದಸ್ಯರ ಸೂಚಿಸಿದ ಕಾಮಗಾರಿಗಳು (ಶ್ರೀ ಎಚ್.ಕೆ. ಪಾಟೀಲ್) | – | 2.60 | 0.75 | – | 2.00 | 0.25 |
| 81. | ಲೋಕಸಭಾ ಸದಸ್ಯರ ಸೂಚಿಸಿದ ಕಾಮಗಾರಿಗಳು (ಶ್ರೀ ಐ.ಜಿ. ಸನದಿ) | 23.87 | 17.045 | 30.12 | 5.73 | 30.12 | 0.60 |
| 82. | ವಿಧಾನ ಪರಿಷತ್ತಿನ ಸದಸ್ಯರು ಸೂಚಿಸಿದ ಕಾಮಗಾರಿಗಳು (ಶ್ರೀ ಸಲೀಂ ಅಹ್ಮದ್) | – | – | – | – | 5.25 | 0.25 |

**2009-10ನೇ ಸಾಲಿನ ಯೋಜನಾ ವೆಚ್ಚದ ಹಂಚಿಕೆ ವಿವರ (ರೂ. ಲಕ್ಷಗಳಲ್ಲಿ)**

| ಅ. ನಂ. | ಲೆಕ್ಕಶೀರ್ಷಿಕೆ | ಪಂ.ರಾ.ಇಂ. ಉಪ-ವಿಭಾಗ ಶಿರಹಟ್ಟಿ |
|---|---|---|
| 1. | ಕೇಂದ್ರ ವಲಯ ನಲ್ಲಿ ನೀರು ಸರಬರಾಜು ಯೋಜನೆ (ಮುಂದುವರೆದ ಕಾಮಗಾರಿಗಳು) | 13.99 |
| 2. | ನಲ್ಲಿ ನೀರು ಸರಬರಾಜು ಯೋಜನೆ (ಕೇಂದ್ರ ವಲಯ-ಸಾಮಾನ್ಯ-ಹೆಚ್ಚಿಸುವುದು) ಮುಂದುವರೆದ ಕಾಮಗಾರಿಗಳು | 11.38 |
| 3. | ರಾಜ್ಯವಲಯ ನಲ್ಲಿ ನೀರು ಸರಬರಾಜು ಯೋಜನೆ (ಮುಂದುವರೆದ ಕಾಮಗಾರಿಗಳು) | 0.00 |
| 4. | ನಲ್ಲಿ ನೀರು ಸರಬರಾಜು ಯೋಜನೆ (ರಾಜ್ಯವಲಯ-ಸಾಮಾನ್ಯ ಹೆಚ್ಚಿಸುವುದು) ಮುಂದುವರೆದ ಕಾಮಗಾರಿಗಳು | 6.10 |
| 5. | TSP ಕಾಮಗಾರಿಗಳು | 13.51 |
| 6. | SCP ಕಾಮಗಾರಿಗಳು | 27.01 |
| 7. | 12ನೇ ಹಣಕಾಸು ಯೋಜನೆಯಡಿ (2515-00-101-0-09) | 10.40 |
| 8. | 12ನೇ ಹಣಕಾಸು ಯೋಜನೆ ಕಾಮಗಾರಿಗಳು (ಪ್ಯಾಕೇಜ್ ಕಾಮಗಾರಿಗಳು) Package-1 | 13.74 |
| 9. | 12ನೇ ಹಣಕಾಸು ಯೋಜನೆಯಡಿ (2515-00-101-0-09) | 10.40 |
| 10. | Package No.2 | 20.00 |
| 11. | Package No.3 | 11.46 |
| 12. | Package No.4 | 13.50 |
| 13. | Package No.5 | 14.21 |
| 14. | 3054 ಮುಖ್ಯಮಂತ್ರಿ ಗ್ರಾಮೀಣ ಅಭಿವೃದ್ಧಿ ಯೋಜನೆ ಅಡಿ ರಸ್ತೆಗಳ ನಿರ್ವಹಣೆ Package -1 | 4.25 |
| 15. | Package No.2 | 4.25 |
| 16. | Package No.3 | 8.00 |
| 17. | Package No.4 | 5.84 |
| 18. | Package No.5 | 7.00 |
| 19 | Package No.6 | 5.00 |
| 20. | Package No.7 | 7.62 |
| 21. | 5054-04-337-7-02 ಮುಂದುವರೆದ ಕಾಮಗಾರಿಗಳು | 4.41 |
| 22. | 5054-04-337-7-02 ಹೊಸ ಸೇತುವೆ ಹೊಸ ಕಾಮಗಾರಿಗಳು: (SCP & TSP ಕಾಮಗಾರಿಗಳು) | 22.475 |
| 23. | 5054-04-337-7-02 ಹೊಸ ಕಾಮಗಾರಿಗಳು (ಸಾಮಾನ್ಯ ಕಾಮಗಾರಿಗಳು) | 67.425 |
| 24. | ಡಾ: ಡಿ.ಎಂ. ನಂಜುಂಡಪ್ಪ ಆಧಾರಿತ ಹಿಂದುಳಿದ ಮತ್ತು ಹೆಚ್ಚು ಹಿಂದುಳಿದ ತಾಲ್ಲೂಕುಗಳ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳು | 23.13 |

| ಅ. ನಂ. | ಲೆಕ್ಕಶೀರ್ಷಿಕೆ | ಪಂ.ರಾ.ಇಂ. ಉಪ–ವಿಭಾಗ ಶಿರಹಟ್ಟಿ |
|---|---|---|
| 25. | ಟಾಸ್ಕ್‌ಫೋರ್ಸ್ ಯೋಜನೆ ಕಾಮಗಾರಿಗಳು | 16.62 |
| 26. | ಟಾಸ್ಕ್‌ಫೋರ್ಸ್ ಯೋಜನೆ ಕಾಮಗಾರಿಗಳು (ARWS4250-01-102-9-04-132) | 14.25 |
| 27. | ಟಾಸ್ಕ್‌ಫೋರ್ಸ್ ಯೋಜನೆ ಕಾಮಗಾರಿಗಳು (ಹೆಚ್ಚುವರಿ ಉಳಿತಾಯದ ಅನುದಾನ) | 3.38 |
| 28. | ಲೆಕ್ಕಶೀರ್ಷಿಕೆ 2702–01–101–72 ಅಡಿಯಲ್ಲಿ | 7.78 |
| 29. | ಲೆಕ್ಕ ಶೀರ್ಷಿಕೆ 4702 ವಿಶೇಷ ಅಭಿವೃದ್ಧಿ ಯೋಜನೆ ಅಡಿ ಸಣ್ಣ ನೀರಾವರಿ ಕೆರೆಗಳು | 28.00 |
| 30. | ಅತೀವೃಷ್ಟಿಯಿಂದ ಹಾನಿಗೊಳಗಾದ ರಸ್ತೆ, ಸೇತುವೆ ದುರಸ್ತಿ | 44.00 |
| 31. | ಮಳೆನೀರು ಕೋಯ್ಲು ಕಾರ್ಯಕ್ರಮ (ಮುಂದುವರೆದ ಕಾಮಗಾರಿಗಳು) | 5.00 |
| 32. | 2009–10ನೇ ಸಾಲಿನ ಕಟ್ಟಡ ಅಭಿವೃದ್ಧಿ ಅನುದಾನ | 2.00 |
| 33. | 2009–10ನೇ ಸಾಲಿನ 2403–00–101–0–61 ಜಿಲ್ಲಾ ಪಂಚಾಯತ್ ಕಾರ್ಯಕ್ರಮ | 5.00 |
| 34. | 2009–10ನೇ ಸಾಲಿನ ಪರಿಶಿಷ್ಟ ಜಾತಿ ಕಾಲನಿಗಳಿಗೆ ಮೂಲಭೂತ ಸೌಕರ್ಯ | 11.36 |
| 35. | 2515–00–103–0–01 ಜಿಲ್ಲಾ ಪಂಚಾಯತ್ ಅಭಿವೃದ್ಧಿ ಅನುದಾನ | 2.00 |
| 36. | 2009–10ನೇ ಸಾಲಿನ ನಿಧಿ–3ರ ಅನುದಾನ | 14.00 |
| 37. | 2009–10ನೇ ಸಾಲಿನ ಜಲಮರು ಪೂರ್ಣ ಕಾರ್ಯಕ್ರಮ | 55.00 |
| 38. | 2205–00–102–1–01 ಬಯಲು ಪ್ರದರ್ಶನ ಮಂದಿರ | 0.53 |
| 39. | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ | 48.00 |
| 40. | ಲೋಕಸಭಾ ಸದಸ್ಯರ ಅನುದಾನ | 20.00 |
| 41. | ರಾಜ್ಯಸಭಾ ಸದಸ್ಯರ ಅನುದಾನ | 15.00 |

**ಕೈಪಿಡಿ–12**

ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಇದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ–13**

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳ ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಪಂ.ರಾ.ಇಂ.ಉಪವಿಭಾಗ ಶಿರಹಟ್ಟಿ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ............................ ಸಹಾಯಕ/ ಕಿರಿಯ ಇಂಜಿನೀಯರ್ ಇವರಿಗೆ ಅರ್ಜಿ ನೀಡುವುದು. ಅಥವಾ ಸಂಪರ್ಕಿಸುವುದು.

ಕಛೇರಿ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ:958487–242494 ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ–14**

ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಪಂ.ರಾ.ಇಂ ಉಪವಿಭಾಗ, ಶಿರಹಟ್ಟಿ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ............................ ಸಹಾಯಕ/ ಕಿರಿಯ ಇಂಜಿನೀಯರ್ ಇವರಿಗೆ ಅರ್ಜಿ ನೀಡುವುದು. ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಅ. ನಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್–5(1) | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ ಸೆಕ್ಷನ್–5(1) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು ಸೆಕ್ಷನ್–19(1) |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಸಹಾಯಕ ಇಂಜಿನೀಯರ್–1 ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಸಹಾಯಕ ಇಂಜಿನೀಯರವರ (ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪ–ವಿಭಾಗ, ಶಿರಹಟ್ಟಿ. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂ.ರಾ.ಇಂ. ಉಪವಿಭಾಗ, ಶಿರಹಟ್ಟಿ. |

**ಕೈಪಿಡಿ–15**

ಇತರೆ ವಿವರಗಳು

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮಗಳಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಶ್ರೀ ಸಿ.ಎಸ್. ಜೋಶಿ**

ಪಿ.ಆರ್.402

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್, ಉಪ–ವಿಭಾಗ, ಶಿರಹಟ್ಟಿ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ನಡವಳಿಕೆಗಳು

**ವಿಷಯ:** ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರ ಅಮಲ್ಜಾರಿ ಪ್ರಕರಣ ಸಂಖ್ಯೆ:35/03–04, ಎಆರ್‌ಇ:ಯುಬಿಎಫ್:35: 2005–06(ವ), ಎಆರ್‌ಇ:ಯುಬಿಎಫ್:ಆರ್‌ಓ:604:2006–07(ವ), (ವ)171: 2006–07ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 38(6)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: ಎ:ಐ ಆ್ಯಂಡ್ ಎಂ: ಡಿಐಎಸ್:ಡಿ–2:1512:99–2000.
ಅಮಲ್ಜಾರಿ ಸಂಖ್ಯೆ:35/03–04, ಎಆರ್‌ಇ:ಯುಬಿಎಫ್:35:2005–06(ವ),
ಎಆರ್‌ಇ:ಯುಬಿಎಫ್:ಆರ್‌ಓ:604:2006–07(ವ), (ವ) 171:2006–07.
2) ಮಾರಾಟಾಧಿಕಾರಿಯವರ ವರದಿ ದಿನಾಂಕ:27.03.2010.

| | | |
|---|---|---|
| ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ | | ಅವಾರ್ಡುದಾರ |
| ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ. | **ವಿರುದ್ಧ** | ತೀರ್ಪುಬಾಕಿದಾರ |

**ಪ್ರಸ್ತಾವನೆ:**

ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ, ಇವರು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ, ಇದರ ಶಿರಸಿ ಪ್ರಧಾನ ಶಾಖೆಯಿಂದ ದಿನಾಂಕ:25.03.1999ರಂದು ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ರೆವೆನ್ಯೂ ಸರ್ವೆ ನಂ.96/129, ಕ್ಷೇತ್ರ 0–07–00–5 ಸ್ಥಿರಾಸ್ತಿ ಹಾಗೂ ಅದರಲ್ಲಿ ಇರತಕ್ಕ ಶಿರಸಿ ನಗರ ಸಭೆ ಇಮಾರತು ನಂ.85 ಹಾಗೂ 85/1 ಸಹಿತ ಅಡಮಾನಮಾಡಿ ಸಾಲ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನವರು

ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಎ: ಐ ಆ್ಯಂಡ್ ಎಂ: ಡಿಐಎಸ್:ಡಿ–2: 1512: 99–2000 ರಂತೆ ದಾವೆ ಹೂಡು ಆದೇಶ ಪಡೆದಿದ್ದರೂ ಸಾಲದ ಬಾಕಿ ಮರುಪಾವತಿ ಮಾಡದೇ ಇರುವುದರಿಂದ ಸದರಿ ಅವಾರ್ಡ್ ಆದೇಶದನ್ವಯ ದಿ ಶಿರಸಿ ಅರ್ಬನ್ ಸೌಹಾರ್ದ ಸಹಕಾರಿ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ನಿಯಮಗಳ ಅಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರಲ್ಲಿ ಮೇಲಿನ ಅವಾರ್ಡನ್ನು ಸಿಇಪಿ ಸಂಖ್ಯೆ: 35/03–04, ಎಆರ್ಇ:ಯುಬಿಎಫ್:35:2005–06 (ವ), ಎಆರ್ಇ:ಯುಬಿಎಫ್: ಆರ್ಓ:604:2006–07(ವ), (ವ) 171:2006–07 ರಂತೆ ದಾಖಲೆ ಮಾಡಿದ್ದು ಮುಂದಿನ ವಸೂಲಿ ಕ್ರಮದ ಬಗ್ಗೆ ಅಮಲ್ಜಾರಿ ಪ್ರಕರಣವನ್ನು ಅಧಿಕಾರ ಹೊಂದಿದ ಬ್ಯಾಂಕಿನ ಮಾರಾಟಾಧಿಕಾರಿಗಳಿಗೆ ವಹಿಸಿದ್ದು, ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸಾಲಕ್ಕೆ ಬ್ಯಾಂಕಿಗೆ ಆಧಾರ ಮಾಡಿದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:20.01.2010ರಂದು ಸಾರ್ವಜನಿಕ ಬಹಿರಂಗ ಹರಾಜಿಗೆ ಇಡಲಾಗಿ, ಸದರಿ ದಿನ ನಡೆಸಿದ ಹರಾಜಿನಲ್ಲಿ ಐದು ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ, ಇವರು ರೂ.18,12,000/– (ರೂ.ಹದಿನೆಂಟು ಲಕ್ಷ ಹನ್ನೆರಡು ಸಾವಿರ ಮಾತ್ರ) ಗಳಿಗೆ ಬಿಡ್ಡು ಮಾಡಿದ್ದು ಅತ್ಯಧಿಕ ಬಿಡ್‌ದಾರರಾಗಿರುತ್ತಾರೆ.

ಅತಿ ಹೆಚ್ಚಿನ ಬಿಡ್‌ದಾರರಾದ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ರವರು ಬಿಡ್ ಮೊತ್ತ ರೂ.18,12,000–00 ರ ಶೇಕಡಾ 15ರ ಬಾಬ್ತು ರೂ.2,72,000–00 (ರೂ. ಎರಡು ಲಕ್ಷ ಎಪ್ಪತ್ತೆರಡು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿನ ಪ್ರಧಾನ ಶಾಖೆ ಶಿರಸಿ ಇದರಲ್ಲಿ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರ ಅಮಾನತ್ ಖಾತೆಗೆ ಪಾವತಿ ಮಾಡಿರುತ್ತಾರೆ. ಉಳಿದ ಬಾಕಿ ಬಿಡ್ ಮೊತ್ತ ರೂ.15,40,000–00 (ರೂ. ಹದಿನೈದು ಲಕ್ಷ ನಲ್ವತ್ತು ಸಾವಿರ ಮಾತ್ರ) ಗಳನ್ನು ಮತ್ತು ಮುದ್ರಾಂಕ ಶುಲ್ಕ ರೂ.1,08,720–00 (ರೂ. ಒಂದು ಲಕ್ಷ ಎಂಟು ಸಾವಿರದ ಏಳುನೂರಾ ಇಪ್ಪತ್ತು ಮಾತ್ರ) ಹಾಗೂ ನೋಂದಣಿ ಫೀ ರೂ.18,120–00 (ರೂ.ಹದಿನೆಂಟು ಸಾವಿರದ ಒಂದು ನೂರಾ ಇಪ್ಪತ್ತು ಮಾತ್ರ) ಗಳನ್ನು ಬಹಿರಂಗ ಹರಾಜು ನಡೆದ 45 ದಿನಗಳ ಅವಧಿಯ ಒಳಗೆ ದಿನಾಂಕ:06.03.2010 ರಂದು ಬ್ಯಾಂಕಿನ ಪ್ರಧಾನ ಶಾಖೆ ಶಿರಸಿ ಇದರಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುವುದು ಮಾರಾಟಾಧಿಕಾರಿಗಳು ಹಾಜರು ಪಡಿಸಿದ ದಾಖಲೆಗಳಿಂದ ಖಚಿತಪಡುತ್ತದೆ.

ಬಹಿರಂಗ ಹರಾಜಿನಲ್ಲಿ ವಿಕ್ರಿ ಮಾಡಿದ ಸ್ಥಿರಾಸ್ತಿಯ ಮೇಲೆ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಹಾಗೂ ಚೇತನಾ ಸಹಕಾರಿ ಬ್ಯಾಂಕ್ ಲಿ., ಶಿರಸಿ ರವರ ಭೋಜಾಗಳು ದಾಖಲಾಗಿದ್ದು, ಚೇತನಾ ಸಹಕಾರಿ ಬ್ಯಾಂಕ್ ನವರು ತಮ್ಮ ಪತ್ರ ಸಂಖ್ಯೆ:1249/09–10 ದಿನಾಂಕ:10.03.2010 ರಲ್ಲಿ ತಮ್ಮ ಬ್ಯಾಂಕಿನ ಭೋಜಾ ಕಡಿಮೆ ಮಾಡುವ ಬಗ್ಗೆ ಅಭ್ಯಂತರವಿರುವುದಿಲ್ಲವೆಂದು ಮೆ: ತಹಸೀಲ್ದಾರರು, ಶಿರಸಿ ರವರಿಗೆ ಬರೆದ ಪತ್ರವನ್ನು ಡಿಕ್ರಿದಾರ ಬ್ಯಾಂಕಿಗೆ ನೀಡಿರುತ್ತಾರೆ. ಸದರಿ ಪತ್ರವನ್ನು ಸಹ ಡಿಕ್ರಿದಾರ ಬ್ಯಾಂಕಿನವರು ಹಾಜರು ಪಡಿಸಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಬಹಿರಂಗ ಹರಾಜಿನ ದಿನಾಂಕ:20.01.2010ರ ವರೆಗೆ ಒಟ್ಟು ರಖಂ ರೂ.21,96,005–00 ಬರತಕ್ಕದ್ದಿರುವುದಾಗಿ ಹರಾಜಿನ ದಿನಾಂಕದಂದು ಶಿರಸಿ ಪ್ರಧಾನ ಶಾಖೆಯ ಶಾಖಾ ವ್ಯವಸ್ಥಾಪಕರು ಲಿಖಿತವಾಗಿ ಸಲ್ಲಿಸಿದ್ದು ಇರುತ್ತದೆ. ಡಿಕ್ರಿದಾರ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಸದರಿ ಹರಾಜಿನಿಂದ ಕೇವಲ ರೂ.18,12,000–00 ಜಮಾ ಬರುವುದರಿಂದ ಅಮಲ್ಜಾರಿ ಪ್ರಕರಣದಲ್ಲಿ ಭಾಗಶಃ ರಖಂ ಜಮಾ ಬಂದಂತಾಗಿರುವುದರಿಂದ ಪ್ರಕರಣದಲ್ಲಿ ಬರತಕ್ಕ ಉಳಿದ ತೀರ್ಪು ಬಾಕಿ ರಖಂ ವಸೂಲಿ ಬಗ್ಗೆ ಪ್ರಕರಣವನ್ನು ಊರ್ಜಿತದಲ್ಲಿಡುವುದು ಸೂಕ್ತವಿರುತ್ತದೆ ಎಂದು ಮಾರಾಟಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಅಧಿಕಾರ ಹೊಂದಿದ ಮಾರಾಟಾಧಿಕಾರಿಯವರು ದಿನಾಂಕ:20.01.2010ರಂದು ನಡೆಸಿದ ಸಾರ್ವಜನಿಕ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮ ನಡೆಸಿರುವುದಾಗಿ ಹಾಗೂ ಬ್ಯಾಂಕಿನ ತೀರ್ಪು ಬಾಕಿದಾರರಾದ ಶ್ರೀ ಆಯ್. ಮಹಾಬಲ್ ಶೆಟ್ಟಿ ರವರ ಸ್ಥಿರಾಸ್ತಿಯನ್ನು ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಬಹಿರಂಗ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (2)ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:20.01.2010ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 13 ಜನ ಹಾಜರಿದ್ದು ಆ ಪೈಕಿ 5 ಜನ ಬಿಡ್‌ದಾರರು ಭಾಗವಹಿಸಿದ್ದು, ಅತ್ಯಧಿಕ

ಬಿಡ್ಡುದಾರರಾದ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ, ಇವರಿಗೆ ರೂ.18,12,000–00 (ರೂ. ಹದಿನೆಂಟು ಲಕ್ಷ ಹನ್ನೆರಡು ಸಾವಿರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳ ಒಳಗಾಗಿ ತೀರ್ಪು ಬಾಕಿದಾರರು ಅಥವಾ ಆಸ್ತಿಯಲ್ಲಿ ಹಿತಾಸಕ್ತಿ ಉಳ್ಳವರಿಂದ ಬಾಕಿ ರಖಂನ್ನು ಡಿಕ್ರಿದಾರ ಬ್ಯಾಂಕಿಗೆ ಭರಣ ಮಾಡಿ ಲಿಲಾವನ್ನು ರದ್ದುಪಡಿಸುವಂತೆ ಕೋರಿ ಯಾವುದೇ ಅರ್ಜಿ ಸಲ್ಲಿಸಿದ್ದು ಇರುವುದಿಲ್ಲ. ಲಿಲಾವು ಆದ ನಂತರದಲ್ಲಿ ಕುಮಾರ ಧನುಷ್ ತಂದೆ ದಿಲೀಪಕುಮಾರ ಶೆಟ್ಟಿ, ನಿಷ್ಪತ್ ನ್ಯಾಚುರಲ್ ಗಾರ್ಡಿಯನ್ ತಾಯಿ ಶ್ರೀಮತಿ ಜಯಲಕ್ಷ್ಮೀ ಕೋಂ ದಿಲೀಪ್‌ಕುಮಾರ್ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಯಲ್ಲಾಪುರ ರಸ್ತೆ, ಶಿರಸಿ ಇವರು ಮಾನ್ಯ ಶಿರಸಿ ಸಿವಿಲ್ ಜಡ್ಜ್ (ಕಿ.ವಿ.) ರವರ ನ್ಯಾಯಾಲಯದಲ್ಲಿ ಮೂಲ ದಾವಾ ನಂಬರ್ 60/2010 ದಾಖಲೆ ಮಾಡಿದ್ದು ಇರುತ್ತದೆ. ನ್ಯಾಯಾಲಯವು ಈ ದಾವೆಯಲ್ಲಿ ಬ್ಯಾಂಕಿನ ವಿರುದ್ಧವಾಗಲಿ ಅಥವಾ ವಸೂಲಾಧಿಕಾರಿಗಳ ವಿರುದ್ಧವಾಗಲೀ ಯಾವುದೇ ತಡೆಯಾಜ್ಞೆ ಆದೇಶವನ್ನು ಮಾಡದೇ ಇರುವುದರಿಂದ ಕಾಯ್ದೆಯಂತೆ ಮುಂದಿನ ಕ್ರಮ ನಡೆಯಿಸಲು ಯಾವುದೇ ಕಾಯ್ದೆ ಅಡೆತಡೆ ಇರುವುದಿಲ್ಲವೆಂಬುದಾಗಿ ಈ ದಾವೆಯಲ್ಲಿ ಡಿಕ್ರಿ ಹೊಂದಿದ ಬ್ಯಾಂಕಿನ ಪರವಾಗಿ ವಾದಿಸುತ್ತಿರುವ ವಕೀಲರು ದಿನಾಂಕ:17.03.2010ರ ತಮ್ಮ ಪತ್ರದಲ್ಲಿ ಕಾನೂನು ಅಭಿಪ್ರಾಯ ತಿಳಿಸಿರುತ್ತಾರೆ. ಅಲ್ಲದೇ ಸದರಿ ದಾವೆಯಲ್ಲಿ 7ನೇ ಪ್ರತಿವಾದಿಯಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರ ಪರವಾಗಿ ವಾದಿಸುತ್ತಿರುವ ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಸಹಾ ಸರ್ಕಾರಿ ವಕೀಲರಿಗೆ ದಿನಾಂಕ:25.03.2010ರ ಮುಖಾಂತರ ಸದರಿ ದಾವೆಯ ಬಗ್ಗೆ ಕಾನೂನು ಅಭಿಪ್ರಾಯ ಕೇಳಲಾಗಿ ಸದ್ರಿ ಸರ್ಕಾರಿ ವಕೀಲರು ದಿನಾಂಕ:10.03.2010ರ ತಮ್ಮ ಪತ್ರ ಸಂಖ್ಯೆ ನಂ.ಸಸವ/ ಶಿರಸಿ/ ಮೂ.ದಾ.60/2010ರಲ್ಲಿ ಪ್ರಸ್ತುತ ದಾವೆಯಲ್ಲಿ ಇಲ್ಲಿಯವರೆಗೆ ಪ್ರತಿವಾದಿಯವರ ವಿರುದ್ಧವಾಗಲಿ ಅಥವಾ ವಾದಿ ವ ಇನ್ನಾರದೇ ವಿರುದ್ಧವಾಗಲಿ ಮಾನ್ಯ ನ್ಯಾಯಾಲಯದಿಂದ ಯಾವುದೇ ತರಹದ ಮಧ್ಯಂತರ ತಡೆಯಾಜ್ಞೆ ಅಥವಾ ಆಸ್ತಿ ಕುರಿತು ಯಥಾಸ್ಥಿತಿ ಕಾಯ್ದುಕೊಳ್ಳುವ ಬಗ್ಗೆ ಆಗಲಿ, ಅಥವಾ ಯಾವುದೇ ತರಹದ ಪ್ರತಿಬಂಧಕ ಆಜ್ಞೆ ವ ಆದೇಶ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹೀಗಿರುವಲ್ಲಿ ದಿನಾಂಕ:20.01.2010ರಂದು ನಡೆಸಲಾದ ಸ್ಥಿರಾಸ್ತಿ ಬಹಿರಂಗ ಹರಾಜನ್ನು ಖಾಯಂಗೊಳಿಸಿ ಅತ್ಯಧಿಕ ಬಿಡ್‌ದಾರರಿಗೆ ಸದರಿ ಆಸ್ತಿಯ ಮೇಲಿನ ಎಲ್ಲಾ ಭೋಜಾ ವ ಶರ್ತುಗಳನ್ನು ಕಡಿಮೆ ಮಾಡಿಸಿ ಆಸ್ತಿ ವರ್ಗಾವಣೆ ಮಾಡುವ ಬಗ್ಗೆ ಆಸ್ತಿ ಹರಾಜು ಸ್ಥಿರೀಕರಣ ಆದೇಶ ಹಾಗೂ ವಿಕ್ರಿ ಪ್ರಮಾಣ ಪತ್ರ ನೀಡುವ ಬಗ್ಗೆ ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣದ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎ.ಆರ್21/ಡಬ್ಲ್ಯೂ/ಸಿಇಪಿ ನಂ.(ವ)171/06–07/2009–10, ದಿನಾಂಕ:31ನೇ ಮಾರ್ಚ್, 2010**

ಶ್ರೀ ಎಸ್.ಬಿ ಅಗೇರ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ:35/03–04, ಎಆರ್‌ಇ:ಯುಬಿಎಫ್:35:2005–06(ವ), ಎಆರ್‌ಇ: ಯುಬಿಎಫ್:ಆರ್‌ಓ:604:2006–07(ವ), (ವ) 171:2006–07ರಲ್ಲಿ ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ ಇವರಿಗೆ ಸೇರಿದ ಶೆಡ್ಯೂಲ್‌ನಲ್ಲಿ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:20.01.2010ರಂದು ಅಧಿಕಾರ ಹೊಂದಿದ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ಇವರು ಅತ್ಯಧಿಕ ಬಿಡ್ಡುದಾರರಾಗಿದ್ದು, ಅತ್ಯಧಿಕ ಬಿಡ್ ರಖಂ ಆದ ರೂ.18,12,000–00 (ರೂ. ಹದಿನೆಂಟು ಲಕ್ಷ ಹನ್ನೆರಡು ಸಾವಿರ ಮಾತ್ರ) ಗಳನ್ನು ಪಡೆದು ಈ ಕೆಳಗೆ ಶೆಡ್ಯೂಲ್‌ನಲ್ಲಿ ಕಾಣಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ. ಅಲ್ಲದೇ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಶಿರಸಿ ಪ್ರಧಾನ ಶಾಖೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ, ಉಪವಿಭಾಗ, ಶಿರಸಿ ಇವರ ಅಮಾನತ್ ಖಾತೆಯಲ್ಲಿ ಜಮಾ ಇರುವ ಒಟ್ಟು ರಖಂ ರೂ.19,38,840–00 (ರೂ. ಹತ್ತೊಂಬತ್ತು ಲಕ್ಷ ಮೂವತ್ತೆಂಟು ಸಾವಿರದ ಎಂಟುನೂರಾ ನಲ್ವತ್ತು) ಗಳಲ್ಲಿ ಸದರಿ ಸ್ಥಿರಾಸ್ತಿ ಅಡವು ಮಾಡಿದ ಬಾಕಿದಾರನ ಸಾಲದ ಖಾತೆಗೆ ರೂ.18,12,000–00 ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ರಖಂ ರೂ.1,26,840–00 ಗಳಲ್ಲಿ ಮುದ್ರಾಂಕ ಶುಲ್ಕಕ್ಕೆ ರೂ.1,08,720–00 ಹಾಗೂ ನೋಂದಣಿ ಫೀ ರೂ.18,120–

00 ಭರಣ ಮಾಡುವ ಬಗ್ಗೆ ಮಾರಾಟಾಧಿಕಾರಿಯವರಿಗೆ ನೀಡಲು ಸದರಿ ಬ್ಯಾಂಕಿನ ಶಿರಸಿ ಪ್ರಧಾನ ಶಾಖೆಯ ಶಾಖಾ ವ್ಯವಸ್ಥಾಪಕರಿಗೆ ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೆ ನಂಬರ್:96/129, ಕ್ಷೇತ್ರ: 0–07–00–5 ಸರ್ವೆ ಗಡಿಯೊಳಗಿನಲ್ಲಿ ಇರತಕ್ಕ ಶಿರಸಿ ನಗರ ಸಭೆ ಇಮಾರತು ನಂಬರ್ 85 ಹಾಗೂ 85/1 ಸಹಿತ.

ಮಾರಾಟದ ಮೊಬಲಗು: ರೂ.18,12,000/–

ಮಾರಾಟ ಮಾಡಿದ ದಿನಾಂಕ: 20.01.2010

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:31.03.2010 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ನಮೂನೆ ಕ್ರಮಾಂಕ–10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ನೋಂದಣಿ ಶುಲ್ಕದ ವಿವರ:**

ಚಲನ್ ರಶೀದಿ ನಂಬರ್: 133511

ದಿನಾಂಕ: 08.04.2010

ರಖಂ : 18120–00

ಶಾಖೆ: ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್, ಶಿರಸಿ.

ದಾವಾ ಸಂಖ್ಯೆ: ಎ:ಐ ಆ್ಯಂಡ್ ಎಂ: ಡಿಐಎಸ್:ಡಿ–2:1512:99–2000

ಅಮಲ್ಜಾರಿ ಸಂಖ್ಯೆ:ಸಿಇಪಿ ಸಂಖ್ಯೆ:35/03–04, ಎಆರ್ಇ:ಯುಬಿಎಫ್:35:2005–06(ವ), ಎಆರ್ಇ:ಯುಬಿಎಫ್:ಆರ್ಓ:604:2006–07(ವ), (ವ) 171:2006–07.

ಹೆಸರು: ಶ್ರೀ ಎಸ್.ಬಿ. ಅಗೇರ,

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ (ಉ.ಕ.)

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ. ..........ಡಿಕ್ರಿದಾರ

**ವಿರುದ್ಧ**

ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ .. ತೀರ್ಪುಬಾಕಿದಾರ

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರಕನ್ನಡ ಜಿಲ್ಲಾ ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ರಹವಾಸಿ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ಇವರು ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ನಿವಾಸಿ ಶ್ರೀ ಆಯ್. ಮಹಾಬಲ ಶೆಟ್ಟಿ, ಇವರಿಂದ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಶಿರಸಿ ಪ್ರಧಾನ ಶಾಖೆಗೆ ಸಂದಾಯವಾಗತಕ್ಕ ಬಾಕಿ ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ:35/03–04, ಎಆರ್ಇ:ಯುಬಿಎಫ್: 35:2005–06(ವ), ಎಆರ್ಇ:ಯುಬಿಎಫ್:ಆರ್ಓ:604:2006–07(ವ), (ವ) 171:2006–07 ನೇದರ ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನು ಸಾಲಕ್ಕೆ ಒತ್ತೆ ನೀಡಿದ ಸ್ಥಿರಾಸ್ತಿಯನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಕೇಂದ್ರ ಕಛೇರಿ ಶಿರಸಿ ಇವರು ನಡೆಸಿದ ಜಾಹೀರ ಲಿಲಾವಿನಲ್ಲಿ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ಇವರು ಖರೀದಿಸಿ, ಖರೀದಿ ರಖಂ, ರೂ.18,12,000/– (ರೂ. ಹದಿನೆಂಟು ಲಕ್ಷ ಹನ್ನೆರಡು ಸಾವಿರ ಮಾತ್ರ) ವನ್ನು ಪಾವತಿ ಮಾಡಿರುತ್ತಾರೆ. ಮತ್ತು ಸದ್ರಿ ವಿಕ್ರಿಯು ನನ್ನಿಂದ ದಿನಾಂಕ:31.03.2010 ರಂದು ಖಾಯಂ ಮಾಡಲ್ಪಟ್ಟಿರುತ್ತದೆ.

**ಸ್ಥಿರಾಸ್ತಿಗಳ ಅನುಬಂಧ**

ನೋಂದಣಿ ಜಿಲ್ಲಾ: ಉತ್ತರ ಕನ್ನಡ

ತಾಲ್ಲೂಕು : ಶಿರಸಿ

ಗ್ರಾಮ: ಶಿರಸಿ.

**ಸ್ಥಿರಾಸ್ತಿಗಳ ವರ್ಣನೆ**

ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೆ ನಂಬರ್:96/129, ಕ್ಷೇತ್ರ: 0–07–00–5 ಸರ್ವೆ ಗಡಿಯೊಳಗಿನಲ್ಲಿ ಇರತಕ್ಕ ಶಿರಸಿ ನಗರ ಸಭೆ ಇಮಾರತು ನಂಬರ್ 85 ಹಾಗೂ 85/1 ಸಹಿತ.

ವಿಕ್ರಿ ಕಿಮ್ಮತ್ತು ಅಂತೂ ರೂ.18,12,000/– (ರೂ. ಹದಿನೆಂಟು ಲಕ್ಷ ಹನ್ನೆರಡು ಸಾವಿರ ಮಾತ್ರ)

ಮಾರಾಟದ ದಿನಾಂಕ:20.01.2010.

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ:31.03.2010 ರಂದು ಕೊಡಲ್ಪಟ್ಟಿತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ಸ್ಥಳ: ಶಿರಸಿ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ. (ಉ.ಕ.)

**ಯಥಾನಕಲು:**

ಇದರ ಯಥಾ ನಕಲುಗಳನ್ನು ಅಭಿನಂದನೆಗಳೊಂದಿಗೆ (1) ಹಿರಿಯ ಉಪನೋಂದಣಾಧಿಕಾರಿಗಳು, ಶಿರಸಿ ರವರಿಗೆ, (2) ಮಾನ್ಯ ತಹಶೀಲ್ದಾರರು ಶಿರಸಿ ತಾಲ್ಲೂಕು, ಶಿರಸಿ ರವರಿಗೆ ಹಾಗೂ (3) ಪೌರಾಯುಕ್ತರು, ನಗರಸಭೆ, ಶಿರಸಿ ರವರಿಗೆ ವಿಕ್ರಿ ಪ್ರಮಾಣ ಪತ್ರದಲ್ಲಿ ನಮೂದಿಸಿದ ಸ್ಥಿರಾಸ್ತಿಗಳ ಕುರಿತು ಸಂಬಂಧಿಸಿದ ದಾಖಲೆಗಳಲ್ಲಿ ಅವಶ್ಯಕ ಬದಲಾವಣೆ ಆಗುವಂತೆ ವ್ಯವಸ್ಥೆ ಮಾಡುವ ಬಗ್ಗೆ ಕೋರಿದೆ.

ಸ್ಥಳ: ಶಿರಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ದಿನಾಂಕ:31 ಮಾರ್ಚ್, 2010 ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ನ್ಯಾಯಾಲಯದಲ್ಲಿ**

**ಫಾರ್ಮ್ ನಂ.11**

**38ನೇ ಯ ರೂಲಿನ (7) ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ದಾವಾ ಸಂಖ್ಯೆ: ಎ:ಐ ಆ್ಯಂಡ್ ಎಂ: ಡಿಐಎಸ್:ಡಿ–2:1512:99–2000

ಅಮಲ್ಜಾರಿ ಸಂಖ್ಯೆ: ಸಿಇಪಿ ಸಂಖ್ಯೆ:35/03–04 ಎಆರ್ಇ:ಯುಬಿಎಫ್:35:2005–06(ವ), ಎಆರ್ಇ:ಯುಬಿಎಫ್: ಆರ್ಓ:604: 2006–07 (ವ) (ವ) 171:2006–07.

ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ನಿವಾಸಿ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ ಇವರು ಈ ಕೆಳಗೆ ತೋರಿಸಿದ ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ 2010ನೇ ಇಸವಿ ಜನವರಿ ತಿಂಗಳ 20ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತರಾಗಿಯೂ ಮತ್ತು ದರಖಾಸ್ತು ರಖಂ ರೂ.18,12,000/– (ರೂಪಾಯಿ ಹದಿನೆಂಟು ಲಕ್ಷ ಹನ್ನೆರಡು ಸಾವಿರ ಮಾತ್ರ) ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಆಯ್. ಮಹಾಬಲ ಶೆಟ್ಟಿ, ಸಹ್ಯಾದ್ರಿ ಕಾಲೋನಿ, ಶಿರಸಿ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ಮಂಜುನಾಥ ನಾಗೇಶ ಶೆಟ್ಟಿ, ಕುಮಟಾ ರೋಡ್, ಶಿರಸಿ, ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲ್ಲೂಕು | ಗ್ರಾಮ | ರೆವೆನ್ಯೂ ಸರ್ವೆ ನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಶಿರಸಿ | ಶಿರಸಿ | 96.129 | 0–07–00–5 | ಶ್ರೀ ಮಂಜುನಾಥ ನಾಗೇಶ ಶೆಟ್ಟಿ |
| | | ಇದರಲ್ಲಿ ಇರತಕ್ಕ ನಗರಸಭೆ ಇಮಾರತು ನಂ.85 ಹಾಗೂ 85/1 ಸಹಿತ | | |

ಸ್ಥಳ: ಶಿರಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ದಿನಾಂಕ:31ನೇ ಮಾರ್ಚ್, 2010 ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

ಪಿ.ಆರ್.616

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ನಡವಳಿಕೆಗಳು

**ವಿಷಯ:** ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರ ಅಮಲ್ಜಾರಿ ಪ್ರಕರಣ ಸಂಖ್ಯೆ (1)ಸಿಇಪಿ ನಂ. 1396/06-07 (2) ಎಆರ್‌ಇ/ಯುಬಿಎಫ್/ ಪ್ರಾ.ಕ./3433/06-07(ವ) 561/06-07 ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರ ಸಂಘಗಳ ನಿಯಮಗಳ ನಿಯಮ 38(6)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: (1) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ-4/313/2002-03 ಅಮಲ್ಜಾರಿ ಸಂಖ್ಯೆ: (2) ಸಿಇಪಿ ನಂ.1396/06-07.

(2) ದಾವಾ ಸಂಖ್ಯೆ: (1) ಆರ್‌ಸಿಎಸ್/ಡಿಐಎಸ್ /ಎಸ್‌ಓಯು/ಡಿ-4/311/2002-03, ಅಮಲ್ಜಾರಿ ಸಂಖ್ಯೆ: (2) ಎಆರ್‌ಇ/ಯುಬಿಎಫ್ / ಪ್ರಾ.ಕ./3433/06-07(ವ) 561/06-07.

(3) ಮಾರಾಟಾಧಿಕಾರಿಯವರ ವರದಿ ದಿನಾಂಕ:27ನೇ ಮಾರ್ಚ್, 2010.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ **ವಿರುದ್ಧ** ಅವಾರ್ಡುದಾರ

ಶ್ರೀ ಅನಂತ ಕೃಷ್ಣ ಶಾನಭಾಗ, ಸಾ: ಬಾಳಗಿಮನೆ, ತೀರ್ಪುಬಾಕಿದಾರ

ತಾಲ್ಲೂಕು, ಯಲ್ಲಾಪುರ.

**ಪ್ರಸ್ತಾವನೆ:**

ಶ್ರೀ ಅನಂತ ಕೃಷ್ಣ ಶಾನಭಾಗ, ಸಾಕೀನ: ಬಾಳಗಿಮನೆ, ತಾಲ್ಲೂಕು, ಯಲ್ಲಾಪುರ ಇವರು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಯಲ್ಲಾಪುರ ಶಾಖೆಯಲ್ಲಿ (1) ದಿನಾಂಕ:16.05.2001 ರಂದು ರೂ.45,00,000-00 (ರೂ. ನಾಲ್ವತ್ತೈದು ಲಕ್ಷ ಮಾತ್ರ) (2) ದಿನಾಂಕ:26.06.2001 ರಂದು ರೂ.10,00,000-00 (ರೂ. ಹತ್ತು ಲಕ್ಷ ಮಾತ್ರ) ಗಳನ್ನು ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: (1) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ-4/313/2002-03 ಹಾಗೂ (2) ದಾವಾ ಸಂಖ್ಯೆ ಆರ್‌ಸಿಎಸ್/ಡಿಐಎಸ್/ ಎಸ್‌ಓಯು/ ಡಿ-4/311/ 2002-03 ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನವರು ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ಮರುಪಾವತಿಯಾಗಿರುವುದಿಲ್ಲ. ನ್ಯಾಯಾಲಯದಿಂದ ಪಡೆದ ಸದರಿ ಡಿಕ್ರಿ ಅನ್ವಯ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ, ಇದರ ಪ್ರಧಾನ ವ್ಯವಸ್ಥಾಪಕರು ಕರ್ನಾಟಕ ಸಹಕಾರ ಸಂಘಗಳ ಕಾಯದೆ 1959ನೇ ಇಸ್ವಿ ಮತ್ತು ರೂಲ್ ನಂಬರ್ 1960ರ ಮೇರೆಗೆ ಏರ್ಪಡಿಸಿದ 34(1)ನೇ ರೂಲ್‌ಗಳ ಮೇರೆಗೆ ಅನುಕ್ರಮ ನಂಬರ್ (1)ರ ಅವಾರ್ಡನ್ನು ಸಹಾಯಕ ನಿಬಂಧಕರು, ಸಹಕಾರಿ ಸಂಘಗಳು ಮತ್ತು ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರಲ್ಲಿ ಅಮಲ್ಜಾರಿ ಪ್ರಕರಣ ನಂಬರ್ 1396/06-07 ರಂತೆ ದಾಖಲೆ ಮಾಡಿದ್ದು ಇರುತ್ತದೆ. ಹಾಗೂ ಅನುಕ್ರಮ ನಂ.(2)ರ ಅವಾರ್ಡನ್ನು ಮಾನ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಪ್ರಾಂತೀಯ ಕಛೇರಿ ಹುಬ್ಬಳ್ಳಿ ರವರಲ್ಲಿ ಅಮಲ್ಜಾರಿ ಪ್ರಕರಣ ನಂಬರ್ 3433/06-07ರ ಮೂಲಕ ದಾಖಲೆ ಮಾಡಿದ್ದು ಮುಂದಿನ ವಸೂಲಿ ಕ್ರಮದ ಬಗ್ಗೆ ಮಾನ್ಯ ಸಹಾಯಕ ನಿಬಂಧಕರು, ಸಹಕಾರಿ ಸಂಘಗಳು, ಶಿರಸಿ ಉಪವಿಭಾಗ, ಶಿರಸಿ ರವರ ಕಛೇರಿಗೆ ವರ್ಗಾವಣೆಗೊಂಡು ಅಮಲ್ಜಾರಿ ಪ್ರಕರಣ ನಂಬರ್ (ವ) 561/06-07 ದಾಖಲಾಗಿ ಸದರಿ ಮೇಲಿನ ಎರಡೂ ಅಮಲ್ಜಾರಿ ಪ್ರಕರಣಗಳನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ ಯಲ್ಲಾಪುರ ಶಾಖೆಯವರಿಗೆ ವಹಿಸಲಾಗಿ, ಸದರಿ ಮಾರಾಟಾಧಿಕಾರಿಯವರು ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿ (1) ಯಲ್ಲಾಪುರ ತಾಲ್ಲೂಕು, ಬಾಳಗಿಮನೆ, ಗ್ರಾಮ ರೆವೆನ್ಯೂ ಸರ್ವೆ ನಂಬರ್ 19/4, ಕ್ಷೇತ್ರ 1-11-00-00 ಹಾಗೂ (2) ಯಲ್ಲಾಪುರ ತಾಲ್ಲೂಕು, ಬಾಳಗಿಮನೆ ಗ್ರಾಮ ರೆವೆನ್ಯೂ ಸರ್ವೆ ನಂಬರ್ 21 ಕ್ಷೇತ್ರ 1-15-00-00 ಗಳನ್ನು ಅಮಲ್ಜಾರಿ ಪ್ರಕರಣಗಳಲ್ಲಿ ಕಬ್ಜಾ ಜಪ್ತಿಗೆ ಒಳಪಡಿಸಿ ಭೋಜಾ ದಾಖಲಿಸಿಕೊಂಡು ಅಂತಿಮವಾಗಿ ದಿನಾಂಕ:03.02.2010 ರಂದು ಸಾರ್ವಜನಿಕ ಹರಾಜಿಗೆ ತೆಗೆದು ಸದರಿ ದಿನ ಹರಾಜಿನ ವೇಳೆಗೆ 32 ಜನ ಹಾಜರಿದ್ದು ಆ ಪೈಕಿ ಹರಾಜಿನಲ್ಲಿ 11 ಜನ ಬಿಡ್‌ದಾರರು ಭಾಗವಹಿಸಿದ್ದು, ಶ್ರೀ ಅನಂತ ಸೂರ್ಯನಾರಾಯಣ ಭಟ್, ಸಾಕೀನ:

ಕೀಚನಾಳ, ಅಂಚೆ: ಬಳಗಾರ, ತಾಲ್ಲೂಕು, ಯಲ್ಲಾಪುರ ಇವರು ರೂ.12,82,000–00 (ರೂ. ಹನ್ನೆರಡು ಲಕ್ಷ ಎಂಬತ್ತೆರಡು ಸಾವಿರ ಮಾತ್ರ) ಗಳಿಗೆ ಬಿಡ್ ಮಾಡಿದ್ದು ಅತ್ಯಧಿಕ ಬಿಡ್‌ದಾರರಾಗಿರುತ್ತಾರೆ.

ಅತ್ಯಧಿಕ ಬಿಡ್‌ದಾರರಾದ ಶ್ರೀ ಅನಂತ ಸೂರ್ಯನಾರಾಯಣ ಭಟ್, ಸಾಕೀನ: ಕೀಚನಾಳ, ಅಂಚೆ: ಬಳಗಾರ, ತಾಲ್ಲೂಕು, ಯಲ್ಲಾಪುರ ರವರು ಬಿಡ್ ರಖಂ ರೂ.12,82,000–00 ಮೊತ್ತದ ಶೇಕಡಾ 15ರ ಬಾಬ್ತು ರೂ.1,95,000–00 (ರೂ. ಒಂದು ಲಕ್ಷ ತೊಂಭತ್ತೈದು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಯಲ್ಲಾಪುರ ಶಾಖೆಯಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಬಿಡ್ ಮೊತ್ತ ರೂ.10,87,000–00 (ರೂ. ಹತ್ತು ಲಕ್ಷ ಎಂಭತ್ತೇಳು ಸಾವಿರ ಮಾತ್ರ) ಗಳನ್ನು ಮತ್ತು ಮುದ್ರಾಂಕ ಶುಲ್ಕ ರೂ.86,920–00 ಹಾಗೂ ನೋಂದಣಿ ಫೀ ರೂ.12,820–00, ಒಟ್ಟು ರೂ.11,86,740–00 ಗಳನ್ನು ದಿನಾಂಕ:18.03.2010 ರಂದು ಅವಧಿಯ ಒಳಗೆ ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ, ಶಾಖೆ: ಯಲ್ಲಾಪುರ ಇವರು ನೀಡಿದ ಸಾಲ ಖಾತೆಗಳ ಬಗ್ಗೆ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣಗಳಲ್ಲಿ ಕೆಳಗೆ ಕಾಣಿಸಿದ ಸ್ಥಿರಾಸ್ತಿಗಳನ್ನು ಕಬ್ಜಾ ಜಪ್ತಿ ಕ್ರಮಕ್ಕೊಳಪಡಿಸಿದಂತೆ ಸದರಿ ಸ್ಥಿರಾಸ್ತಿಗಳ ರೆಕಾರ್ಡ್ ಉತಾರ ಮೇಲೆ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರ ಜಪ್ತಿ ಭೋಜಾ ದಾಖಲಾಗಿರುತ್ತದೆ. ಅಲ್ಲದೇ ಸದರಿ ಸ್ಥಿರಾಸ್ತಿಗಳ ಮೇಲೆ ಸಿಂಡಿಕೇಟ್ ಬ್ಯಾಂಕ್ ಯಲ್ಲಾಪುರ ಶಾಖೆಯ ಭೋಜಾಗಳು ದಾಖಲಿದ್ದು ಸಿವಿಲ್ ಜಡ್ಜ್ (ಹಿ.ವಿ.) ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಬಾಕಿ ರಖಂ ವಸೂಲಿ ಬಗ್ಗೆ ಅಮಲ್ಜಾರಿ ಪ್ರಕರಣ 110/03 ದಾಖಲಾಗಿ ರೆಕಾರ್ಡ್ ಆಫ್ ರೈಟ್ ಗೇಣಿ ಹಾಗೂ ಪಹಣಿ ಪತ್ರಿಕೆಯಲ್ಲಿ ನ್ಯಾಯಾಲಯದ ಭೋಜಾ ಸಹ ದಾಖಲಾಗಿದ್ದು ಇರುತ್ತದೆ. ಹಾಗೂ ಚೇತನಾ ಸಹಕಾರಿ ಬ್ಯಾಂಕ್ ನಿ., ಶಾಖೆ: ಯಲ್ಲಾಪುರ ಇವರ ಕಬ್ಜಾ ಜಪ್ತಿ ಭೋಜಾ ಸಹ ದಾಖಲಾಗಿದ್ದು ಇರುತ್ತದೆ. ಸಿಂಡಿಕೇಟ್ ಬ್ಯಾಂಕ್ ಯಲ್ಲಾಪುರ ಇವರು ತಮ್ಮ ಪತ್ರ ಸಂಖ್ಯೆ:141/0313/ಆರ್‌ಇಸಿ/2010 ದಿನಾಂಕ:24.03.2010 ರಂದು ತಮಗೆ ರೂ.1,08,024–00 (ರೂ. ಒಂದು ಲಕ್ಷ ಎಂಟು ಸಾವಿರದ ಇಪ್ಪತ್ತನಾಲ್ಕು ಮಾತ್ರ) ಗಳನ್ನು ಜಮಾಪಡಿಸಿದಲ್ಲಿ ಬ್ಯಾಂಕ್ ಭೋಜಾ ಹಾಗೂ ಸದರಿ ವಿಷಯವಾಗಿ ನ್ಯಾಯಾಲಯದಿಂದ ದಾಖಲು ಆದ ಭೋಜಾ ಕಡಿಮೆ ಮಾಡುವ ಬಗ್ಗೆ ಒಪ್ಪಿಗೆ ಪತ್ರ ನೀಡುವುದಾಗಿ ತಿಳಿಸಿರುತ್ತಾರೆ ಹಾಗೂ ಚೇತನಾ ಸಹಕಾರಿ ಬ್ಯಾಂಕ್ ನಿ., ಶಿರಸಿ ರವರು ತಮ್ಮ ಪತ್ರ ಸಂಖ್ಯೆ: ಜಾ.ನ/1280/09–10 ರಂತೆ ರೂ.25,000–00 (ರೂ. ಇಪ್ಪತ್ತೈದು ಸಾವಿರ ಮಾತ್ರ) ಗಳನ್ನು ತಮ್ಮ ಬ್ಯಾಂಕಿಗೆ ಜಮಾ ಪಡಿಸಿದಲ್ಲಿ ಜಪ್ತಿ ಭೋಜಾ ಕಡಿಮೆ ಮಾಡಿಕೊಡುವ ಬಗ್ಗೆ ಒಪ್ಪಿಗೆ ಪತ್ರ ನೀಡುವುದಾಗಿ ತಿಳಿಸಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಬಹಿರಂಗ ಹರಾಜು ದಿನಾಂಕ:03.02.2010 ರ ವರೆಗೆ ಎರಡು ಅಮಲ್ಜಾರಿ ಪ್ರಕರಣಗಳಿಂದ ಒಟ್ಟು ರಖಂ ರೂ.74,10,078–00 ಬರತಕ್ಕದ್ದಿರುವುದಾಗಿ ಹರಾಜು ದಿನಾಂಕದಂದು ಯಲ್ಲಾಪುರ ಶಾಖೆಯ ಶಾಖಾ ವ್ಯವಸ್ಥಾಪಕರು ಲಿಖಿತವಾಗಿ ಪತ್ರ ಸಲ್ಲಿಸಿದ್ದು ಇರುತ್ತದೆ. ಡಿಕ್ರಿದಾರ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಸದರಿ ಹರಾಜಿನಿಂದ ಭಾಗಶಃ ರಖಂ ಜಮಾ ಬಂದಿರುವುದರಿಂದ ಪ್ರಕರಣಗಳಲ್ಲಿ ಬರತಕ್ಕ ಉಳಿದ ತೀರ್ಮ ಬಾಕಿ ರಖಂ ವಸೂಲಿ ಬಗ್ಗೆ ಪ್ರಕರಣಗಳನ್ನು ಉರ್ಜಿತದಲ್ಲಿ ಇಡುವುದು ಸೂಕ್ತವಿರುತ್ತದೆ ಎಂಬುದಾಗಿ ಮಾರಾಟಾಧಿಕಾರಿಯವರು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:03.02.2010ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮ 1960ಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರರಾದ ಶ್ರೀ ಅನಂತ ಕೃಷ್ಣ ಶಾನಭಾಗ ಇವರ ಸ್ಥಿರಾಸ್ತಿಯನ್ನು ಶ್ರೀ ಅನಂತ ಸೂರ್ಯನಾರಾಯಣ ಭಟ್ಟ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:03.02.2010 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ತಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 11 ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಅನಂತ ಸೂರ್ಯನಾರಾಯಣ ಭಟ್ಟ ಇವರಿಗೆ ರೂ.12,82,000–00 (ರೂ. ಹನ್ನೆರಡು ಲಕ್ಷ ಎಂಭತ್ತೆರಡು ಸಾವಿರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗೆ ಬಾಕಿದಾರರು ಅಥವಾ ಆಸ್ತಿಯಲ್ಲಿ ಹಿತಾಸಕ್ತಿ ಉಳ್ಳವರಿಂದ ಬಾಕಿ ರಖಂ ಅನ್ನು ಅವಾರ್ಡ್‌ದಾರ ಬ್ಯಾಂಕಿಗೆ ಭರಣ ಮಾಡಿ

ಲಿಲಾವನ್ನು ರದ್ದುಪಡಿಸುವಂತೆ ಕೋರಿ ಯಾವುದೇ ಅರ್ಜಿ ಸಲ್ಲಿಸಿದ್ದು ಇರುವುದಿಲ್ಲ. ಹೀಗಿರುವಾಗ ದಿನಾಂಕ:03.02.2010ರಂದು ನಡೆಸಲಾದ ಸ್ಥಿರಾಸ್ತಿ ಬಹಿರಂಗ ಹರಾಜನ್ನು ಖಾಯಂಗೊಳಿಸಿ ಅತ್ಯಧಿಕ ಬಿಡ್‌ದಾರರಿಗೆ ಸದರಿ ಆಸ್ತಿಗಳ ಮೇಲಿನ ಎಲ್ಲಾ ಭೋಜಾಗಳನ್ನು ಕಡಿಮೆ ಮಾಡಿಸಿ ಆಸ್ತಿ ವರ್ಗಾವಣೆ ಮಾಡುವ ಬಗ್ಗೆ ಆಸ್ತಿ ಹರಾಜು ಸ್ಥಿರೀಕರಣ ಆದೇಶ ಹಾಗೂ ವಿಕ್ರಿ ಪ್ರಮಾಣಪತ್ರ ನೀಡುವ ಬಗ್ಗೆ ಮಾರಾಟಾಧಿಕಾರಿ ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿ ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ:ಎ.ಆರ್21/ಡಬ್ಲ್ಯೂ/ಸಿಇಪಿ ನಂ.1396/06–07 ಹಾಗೂ (ಡಬ್ಲ್ಯೂ)561/06–07/2010,**

**ದಿನಾಂಕ:29ನೇ ಮಾರ್ಚ್, 2010**

ಶ್ರೀ ಎಸ್.ಬಿ ಅಗೇರ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ:(1) ಸಿಇಪಿ 1396/2006–07 ಹಾಗೂ (2) ಸಿಇಪಿ:ಎಆರ್‌ಇ/ಯುಬಿಎಫ್/ಪ್ರಾ.ಕ.3433/06–07(ವ)561/06–07 ಪ್ರಕರಣಗಳಲ್ಲಿ ಶ್ರೀ ಅನಂತ ಕೃಷ್ಣ ಶಾನಭಾಗ ಇವರಿಗೆ ಸೇರಿದ ಸ್ಥಿರಾಸ್ತಿಗಳನ್ನು ದಿನಾಂಕ:03.02.2010 ರಂದು ಅವಾರ್ಡ್‌ದಾರ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಅನಂತ ಸೂರ್ಯನಾರಾಯಣ ಭಟ್ಟ, ಸಾಕೀನ: ಕೀಚನಾಳ, ಅಂಚೆ: ಬಳಗಾರ, ತಾಲ್ಲೂಕು:ಯಲ್ಲಾಪುರ ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.12,82,000–00 (ರೂ.ಹನ್ನೆರಡು ಲಕ್ಷ ಎಂಬತ್ತೆರಡು ಸಾವಿರ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸುವುದಾಗಿ ಈ ಮೂಲಕ ಆದೇಶ ಮಾಡಿದೆ. ಅಲ್ಲದೇ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ನಿ., ಶಿರಸಿ ಇದರ ಯಲ್ಲಾಪುರ ಶಾಖೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ಅಮಾನತ್ ಖಾತೆಯಲ್ಲಿ ಜಮಾ ಇರುವ ಒಟ್ಟು ರಖಂ ರೂ.13,81,740–00 ಗಳಲ್ಲಿ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನಲ್ಲಿ ಬಾಕಿದಾರನು ಹೊಂದಿರುವ ಸಾಲ ಖಾತೆಗಳಿಗೆ ರೂ.11,48,425–00 ಗಳನ್ನು ಜಮಾ ಪಡೆದು ಉಳಿದ ಹಣದಲ್ಲಿ ಮುದ್ರಾಂಕ ಶುಲ್ಕ ರೂ.86,920–00 ಹಾಗೂ ನೋಂದಣಿ ಫೀ ರೂ.12,820–00 ಭರಣ ಮಾಡಲು ಸಹ ಯಲ್ಲಾಪುರ ಶಾಖೆಯ ಶಾಖಾ ವ್ಯವಸ್ಥಾಪಕರಿಗೆ ಈ ಮೂಲಕ ಆದೇಶ ನೀಡಲಾಗಿದೆ ಹಾಗೂ ಉಳಿದ ರಖಂನಲ್ಲಿ ಸಿಂಡಿಕೇಟ್ ಬ್ಯಾಂಕ್ ಯಲ್ಲಾಪುರ ರವರು ಹೊಂದಿರುವ ಶ್ರೀ ಅನಂತ ಕೃಷ್ಣ ಶಾನಭಾಗ ಇವರ ಸಾಲ ಖಾತೆಗೆ ರೂ.1.08,575–00 ಹಾಗೂ ಚೇತನಾ ಸಹಕಾರಿ ಬ್ಯಾಂಕ್ ನಿ., ಶಿರಸಿ ರವರು ಹೊಂದಿರುವ ಶ್ರೀ ಅನಂತ ಕೃಷ್ಣ ಶಾನಭಾಗ ರವರ ಸಾಲ ಖಾತೆಗೆ ರೂ.25,000–00 ಗಳನ್ನು ಜಮಾ ನೀಡಲು ಈ ಮಊಲಕ ಆದೇಶಿಸಲಾಗಿದೆ.

**ಸ್ಥಿರಾಸ್ತಿಯ ವಿವರ**

(1) ಉತ್ತರ ಕನ್ನಡ ಜಿಲ್ಲಾ, ಯಲ್ಲಾಪುರ ತಾಲ್ಲೂಕು, ಬಾಳಗಿಮನೆ ಗ್ರಾಮ ರೆವೆನ್ಯೂ ಸರ್ವೆ ನಂಬರ್ 19/4, ಕ್ಷೇತ್ರ:1–11–00 ಹಾಗೂ (2) ಉತ್ತರ ಕನ್ನಡ ಜಿಲ್ಲಾ, ಯಲ್ಲಾಪುರ ತಾಲ್ಲೂಕು ಬಾಳಗಿಮನೆ ಗ್ರಾಮ ರೆವೆನ್ಯೂ ಸರ್ವೆ ನಂಬರ್ 21, ಕ್ಷೇತ್ರ: 1–15–00, ಸರ್ವೆ ಗಡಿಯೊಳಗಿನ ಆಸ್ತಿಗಳು.

ಮಾರಾಟದ ಮೊಬಲಗು: ರೂ.12,82,000/–

ಮಾರಾಟ ಮಾಡಿದ ದಿನಾಂಕ: 03.02.2010

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:29.03.2010 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ನಮೂನೆ ಕ್ರಮಾಂಕ–10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ನೋಂದಣಿ ಶುಲ್ಕದ ವಿವರ:**

ಚಲನ್ ರಶೀದಿ ನಂಬರ್: 226971

ದಿನಾಂಕ: 31.03.2010

ರಖಂ : 12820/–

ಶಾಖೆ: ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಯಲ್ಲಾಪುರ.

ದಾವಾ ಸಂಖ್ಯೆ: (1) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ–4/313/2002–03
(2) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ–4/311/2002–03

ಅಮಲ್ಜಾರಿ ಸಂಖ್ಯೆ:(1) ಸಿಇಪಿ ನಂ.1396/06–07.
(2) ಎಆರ್‌ಇ/ಯುಬಿಎಫ್/ಪ್ರಾ.ಕ./3433/06–07(ವ)561/06–07

ಹೆಸರು: ಶ್ರೀ ಎಸ್.ಬಿ. ಅಗೇರ,

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ (ಉ.ಕ.)

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ. ..........ಡಿಕ್ರಿದಾರ

**ವಿರುದ್ಧ**

ಶ್ರೀ ಅನಂತ ಕೃಷ್ಣ ಶಾನಭಾಗ, ಯಲ್ಲಾಪುರ .. ತೀರ್ಪುಬಾಕಿದಾರ

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರಕನ್ನಡ ಜಿಲ್ಲಾ ಯಲ್ಲಾಪುರ ತಾಲ್ಲೂಕು, ಅಂಚೆ: ಬಳಗಾರ, ಕೀಚನಾಳ ಗ್ರಾಮದ ರಹವಾಸಿ ಶ್ರೀ ಅನಂತ ಸೂರ್ಯನಾರಾಯಣ ಭಟ್, ಇವರು ಉತ್ತರ ಕನ್ನಡ ಜಿಲ್ಲಾ, ಯಲ್ಲಾಪುರ ತಾಲ್ಲೂಕು, ಬಾಳಗಿಮನೆ ಗ್ರಾಮದ ನಿವಾಸಿ ಶ್ರೀ ಅನಂತ ಕೃಷ್ಣ ಶಾನಭಾಗ ಇವರಿಂದ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಯಲ್ಲಾಪುರ ಶಾಖೆಗೆ ಸಂದಾಯವಾಗತಕ್ಕ ಬಾಕಿ ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ:ಸಿಇಪಿ ನಂ.1396/06–07 ಹಾಗೂ (2) ಎಆರ್‌ಇ/ಯುಬಿಎಫ್/ ಪ್ರಾ.ಕ./3433/06–07(ವ)561/06–07 ನೇದರ ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನ ಸಾಲಕ್ಕೆ ಅಮಲ್ಜಾರಿ ಪ್ರಕರಣಗಳಲ್ಲಿ ಜಪ್ತಿ ಮಾಡಲ್ಪಟ್ಟ ಸ್ಥಿರಾಸ್ತಿಗಳನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಯಲ್ಲಾಪುರ, ಮುಂಡಗೋಡ ಹಾಗೂ ಬನವಾಸಿ ಶಾಖೆ, ಇವರು ನಡೆಸಿದ ಜಾಹೀರ ಲಿಲಾವಿನಲ್ಲಿ ಶ್ರೀ ಅನಂತ ಸೂರ್ಯನಾರಾಯಣ ಭಟ್, ಸಾಕೀನ: ಕೀಚನಾಳ, ಅಂಚೆ: ಬಳಗಾರ, ತಾಲ್ಲೂಕು: ಯಲ್ಲಾಪುರ ಇವರು ಖರೀದಿಸಿ, ಖರೀದಿ ರಖಂ ರೂ.12,82,000/– (ರೂ. ಹನ್ನೆರಡು ಲಕ್ಷ ಎಂಬತ್ತೆರಡು ಸಾವಿರ ಮಾತ್ರ) ವನ್ನು ಪಾವತಿ ಮಾಡಿರುತ್ತಾರೆ. ಮತ್ತು ಸದರಿ ವಿಕ್ರಿಯು ನನ್ನಿಂದ ದಿನಾಂಕ:29.03.2010 ರಂದು ಖಾಯಂ ಮಾಡಲ್ಪಟ್ಟಿರುತ್ತದೆ.

**ಸ್ಥಿರಾಸ್ತಿಗಳ ಅನುಬಂಧ**

ನೋಂದಣಿ ಜಿಲ್ಲಾ: ಉತ್ತರ ಕನ್ನಡ

ತಾಲ್ಲೂಕು : ಯಲ್ಲಾಪುರ.

ಗ್ರಾಮ: ಬಾಳಗಿಮನೆ.

**ಸ್ಥಿರಾಸ್ತಿಗಳ ವರ್ಣನೆ**

| ಅ.ನಂ. | ತಾಲ್ಲೂಕು | ಗ್ರಾಮ | ರೆ.ಸರ್ವೆ ನಂಬರ್ | ಕ್ಷೇತ್ರ | ಆಕಾರ | ಷರಾ |
|---|---|---|---|---|---|---|
| 1. | ಯಲ್ಲಾಪುರ | ಬಾಳಗಿಮನೆ | 19/4 | 1–11–00–00 | 8.05 | ಸರ್ವೆ ಗಡಿಯೊಳಗಿನ ಆಸ್ತಿಗಳು |
| 2. | ಯಲ್ಲಾಪುರ | ಬಾಳಗಿಮನೆ | 21 | 1–15–00–00 | 28.44 | |

ವಿಕ್ರಿ ಕಿಮ್ಮತ್ತು ಅಂತೂ ರೂ.12,82,000/– (ರೂ. ಹನ್ನೆರಡು ಲಕ್ಷ ಎಂಬತ್ತೆರಡು ಸಾವಿರ ಮಾತ್ರ)

ಮಾರಾಟದ ದಿನಾಂಕ:03.02.2010.

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ:29..03.2010 ರಂದು ಕೊಡಲ್ಪಟ್ಟಿತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ಸ್ಥಳ: ಶಿರಸಿ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ಯಥಾನಕಲು:**

ಇದರ ಯಥಾ ನಕಲುಗಳನ್ನು ಅಭಿನಂದನೆಗಳೊಂದಿಗೆ (1) ಮಾನ್ಯ ತಹಶೀಲ್ದಾರರು, ಯಲ್ಲಾಪುರ ರವರಿಗೆ, (2) ಉಪನೋಂದಣಾಧಿಕಾರಿಗಳು, ಹಳಿಯಾಳ ರವರಿಗೆ ವಿಕ್ರಿ ಪ್ರಮಾಣ ಪತ್ರದಲ್ಲಿ ನಮೂದಿಸಿದ ಸ್ಥಿರಾಸ್ತಿಗಳ ಕುರಿತು ಸಂಬಂಧಿಸಿದ ದಾಖಲೆಗಳಲ್ಲಿ ಅವಶ್ಯಕ ಬದಲಾವಣೆ ಆಗುವಂತೆ ವ್ಯವಸ್ಥೆ ಮಾಡುವ ಬಗ್ಗೆ ಕೋರಿದೆ.

ಸ್ಥಳ: ಶಿರಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ

ದಿನಾಂಕ:29ನೇ ಮಾರ್ಚ್, 2010 ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ,**

**ಶಿರಸಿ ಇವರ ನ್ಯಾಯಾಲಯದಲ್ಲಿ**

**ಫಾರ್ಮ್ ನಂ.11**

**38ನೇ ಯ ರೂಲಿನ (7) ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ದಾವಾ ಸಂಖ್ಯೆ: (1) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ–4/313/2002–03

(2) ಆರ್‌ಸಿಎಸ್/ಡಿಐಎಸ್/ಎಸ್‌ಓಯು/ಡಿ–4/311/2002–03

ಅಮಲ್ಜಾರಿ ಸಂಖ್ಯೆ:(1) ಸಿಇಪಿ ನಂ.1396/06–07.

(2) ಎಆರ್‌ಇ/ಯುಬಿಎಫ್/ಪ್ರಾ.ಕ./3433/06–07(ವ)561/06–07.

ಉತ್ತರಕನ್ನಡ ಜಿಲ್ಲಾ, ಯಲ್ಲಾಪುರ ತಾಲ್ಲೂಕು, ಅಂಚೆ: ಬಳಗಾರ, ಕೀಚನಾಳ ಗ್ರಾಮದ ನಿವಾಸಿ ಶ್ರೀ ಅನಂತ ಸೂರ್ಯನಾರಾಯಣ ಭಟ್, ಇವರು ಈ ಕೆಳಗೆ ತೋರಿಸಿದ ಶ್ರೀ ಅನಂತ ಕೃಷ್ಣ ಶಾನಭಾಗ, ಬಾಳಗಿಮನೆ, ತಾಲ್ಲೂಕು: ಯಲ್ಲಾಪುರ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ 2010ನೇ ಇಸವಿ ಫೆಬ್ರವರಿ ತಿಂಗಳ 3ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತಾರಾಗಿಯೂ ಮತ್ತು ದರಖಾಸ್ತು ರಖಂ ರೂ.12,82,000/– (ರೂಪಾಯಿ ಹನ್ನೆರಡು ಲಕ್ಷ ಎಂಬತ್ತೆರಡು ಸಾವಿರ ಮಾತ್ರ) ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಅನಂತ ಕೃಷ್ಣ ಶಾನಭಾಗ, ಸಾ:ಬಾಳಗಿಮನೆ, ತಾಲ್ಲೂಕು: ಯಲ್ಲಾಪುರ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ಅನಂತ ಸೂರ್ಯಾನಾರಾಯಣ ಭಟ್, ಸಾಕೀನ: ಕೀಚನಾಳ, ಅಂಚೆ: ಬಳಗಾರ, ತಾಲ್ಲೂಕು: ಯಲ್ಲಾಪುರ ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲ್ಲೂಕು | ಗ್ರಾಮ | ರೆವೆನ್ಯೂ ಸರ್ವೆ ನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಯಲ್ಲಾಪುರ | ಬಾಳಗಿಮನೆ | 19/4 | 1–11–00–00 | ಶ್ರೀ ಅನಂತ ಸೂರ್ಯನಾರಾಯಣ ಭಟ್ |
| ಯಲ್ಲಾಪುರ | ಬಾಳಗಿಮನೆ | 21 | 1–15–00–00 | |

ಸ್ಥಳ: ಶಿರಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು

ದಿನಾಂಕ:29ನೇ ಮಾರ್ಚ್, 2010 ಹಾಗೂ ವಸೂಲಾಧಿಕಾರಿಗಳು,

ಪಿ.ಆರ್.617 ಶಿರಸಿ ಉಪವಿಭಾಗ, ಶಿರಸಿ.

## ಉಡುಪಿ ಜಿಲ್ಲಾ ಪಂಚಾಯತ್ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರ ಕಛೇರಿ, ಉಡುಪಿ

### ಜ್ಞಾಪನ

**ನಂ.ಎ2/440/ಇತರ/2007–08 (ಶಿಸ್ತು ಕ್ರಮ) ದಿನಾಂಕ:9ನೇ ಏಪ್ರಿಲ್, 2010**

**ವಿಷಯ:** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನಲ್ಲೂರು ಕಾರ್ಕಳ ವಲಯದ ಸಹ ಶಿಕ್ಷಕರಾದ ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರ ಅನಧಿಕೃತ ಗೈರು ಹಾಜರಿ ಆರೋಪ ಸರ್ಕಾರಿ ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಾರ್ಕಳ ವಲಯ ಇವರ ಪತ್ರ ಸಂಖ್ಯೆ:ಎ3/ರ.ಮಂ.46/2006–07, ದಿನಾಂಕ: 01.12.2008.

2) ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಇವರ ಪತ್ರ ಸಂಖ್ಯೆ: ನಂ.ಎ2/440/ಇತರ/2007–08 ದಿನಾಂಕ:10.01.2009 ಮತ್ತು 05.05.2009 ಮತ್ತು ದಿನಾಂಕ: 02.09.2009ರ ಉದಯವಾಣಿ ದಿನ ಪತ್ರಿಕೆಯಲ್ಲಿ ನೀಡಿದ ಪ್ರಕಟಣೆ.

3) ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರ ಪತ್ರ ದಿನಾಂಕ:07.09.2009 ಮತ್ತು 04.11.2010.

4) ಉಪನಿರ್ದೇಶಕರು (ಆಡಳಿತ) ಹಾಗೂ ಶಿಸ್ತು ಪ್ರಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಉಡುಪಿ ಇವರ ಸಂಖ್ಯೆ:ಎ2/440/ಇತರ/ 2007–08 (ಶಿಸ್ತು ಕ್ರಮ) ದಿನಾಂಕ:04.11.2009ರ ಪತ್ರ ಹಾಗೂ ಕಾರಣ ಕೇಳುವ ನೋಟೀಸು ಮತ್ತು ಅಧಿಕೃತ ಜ್ಞಾಪನ.

5) ಉಪನಿರ್ದೇಶಕರು (ಆಡಳಿತ) ಹಾಗೂ ಶಿಸ್ತು ಪ್ರಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಉಡುಪಿ ಇವರ ಸಂಖ್ಯೆ:ಎ2/440/ಇತರ/ 2007–08 (ಶಿಸ್ತು ಕ್ರಮ) ದಿನಾಂಕ:01.01.2010.

**ಪ್ರಸ್ತಾವನೆ:**

ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರು ದಿನಾಂಕ:22.11.1996ರಂದು ಸ.ಕಿ. ಪ್ರಾ.ಶಾಲೆ, ಮುದೂರು, ಕುಂದಾಪುರ ತಾಲ್ಲೂಕು ಇಲ್ಲಿ ಸಹ ಶಿಕ್ಷಕರಾಗಿ ಕರ್ತವ್ಯಕ್ಕೆ ಸೇರ್ಪಡೆಗೊಂಡಿದ್ದು, ನಂತರ ಸ.ಹಿ. ಪ್ರಾ.ಶಾಲೆ, ನಲ್ಲೂರು, ಕಾರ್ಕಳ ವಲಯ ಇಲ್ಲಿಗೆ ವರ್ಗಾವಣೆಗೊಂಡು ದಿನಾಂಕ:20.08.2002ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿಯವರು ಈ ಶಾಲೆಯಲ್ಲಿ ದಿನಾಂಕ:03.10.2006 ರಿಂದ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಇವರ ಅನಧಿಕೃತ ಗೈರು ಹಾಜರಿಯ ನೆಲೆಯಲ್ಲಿ ಇವರಿಗೆ ಕ್ಷೇತ್ರ ಶಿಕ್ಷಣಾಧಿಕಾರಿ, ಕಾರ್ಕಳ ಇವರು ಹಲವಾರು ಬಾರಿ ಜ್ಞಾಪನ ಪತ್ರಗಳನ್ನು ನೋಂದಣಿ ಅಂಚೆ ಮೂಲಕ ನೀಡಿದರೂ ಸ್ವೀಕೃತವಾಗದೇ "ಲೆಫ್ಟ್ ಇಂಡಿಯಾ" ಎಂಬ ಅಂಚೆ ಇಲಾಖೆಯ ಷರಾದೊಂದಿಗೆ ಹಿಂದೆ ಬಂದಿರುವುದಾಗಿ ಉಲ್ಲೇಖ (1)ರಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ವರದಿ ಮಾಡಿರುತ್ತಾರೆ. ಈ ರೀತಿಯಿಂದಾಗಿ ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರನ್ನು ವಿಚಾರಣೆಗೆ ಒಳಪಡಿಸಲು ಅಸಾಧ್ಯವಾದ ಹಿನ್ನಲೆಯಲ್ಲಿ ದಿನಾಂಕ:02.09.2009ರ ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ ಈ ಪ್ರಕಟಣೆಗೆ ಸ್ಪಂದಿಸಿ ದಿನಾಂಕ:07.09.2009ರಂದು ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ರವರು ಒಂದು ಮನವಿಯನ್ನು ಸಲ್ಲಿಸಿರುತ್ತಾರೆ. ಈ ಮನವಿಯಲ್ಲಿ ತಾನು ಆರ್ಥಿಕ ಸಂಕಷ್ಟಕ್ಕೆ ಸಿಲುಕಿ ಅದನ್ನು ಎದುರಿಸುವ ಸಲುವಾಗಿ ದುಬೈ ರಾಷ್ಟ್ರಕ್ಕೆ ತೆರಳಿ ಅನಧಿಕೃತವಾಗಿ ಗೈರು ಹಾಜರಾಗಿರುವುದನ್ನು ಒಪ್ಪಿರುವುದಲ್ಲದೇ ಕರ್ತವ್ಯಕ್ಕೆ ಹಾಜರುಪಡಿಸಲು ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಇವರನ್ನು ನಿಯಮಾನುಸಾರ ವಿಚಾರಣೆಗೆ ಒಳಪಡಿಸುವುದು ಸೂಕ್ತವೆಂದು ದಿನಾಂಕ:08.09.2009ರ ಪತ್ರದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅವಕಾಶ ಕಲ್ಪಿಸಲಾಯಿತು. ಆದರೆ ಇವರು ಕರ್ತವ್ಯಕ್ಕೆ ಹಾಜರಾಗದೆ ಪುನಃ ಕೆಲವು ಕಾರಣಗಳನ್ನು ತಿಳಿಸಿ ದಿನಾಂಕ:04.11.2009ರಂದು ಕರ್ತವ್ಯಕ್ಕೆ ಹಾಜರಾಗಲು ಮನವಿ ಸಲ್ಲಿಸಿರುತ್ತಾರೆ. ಇವರ ಮನವಿಯಡಿ ಉಲ್ಲೇಖ (4)ರ ಪತ್ರದಂತೆ ಕರ್ತವ್ಯಕ್ಕೆ ಹಾಜರಾಗಲು ಅನುಮತಿಸಲಾಗಿರುತ್ತದೆ. ಅದೇ ದಿನ ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಲು ಹಾಗೂ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ಕೂಡಾ ಆದೇಶ ನೀಡಲಾಯಿತು. ಇದರಂತೆ ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರು ದಿನಾಂಕ:06.11.2009ರ ಅಪರಾಹ್ನ ಶಾಲೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಅಲ್ಲದೇ ಅದೇ ದಿನ ಆರೋಪ ಪಟ್ಟಿಯನ್ನು ಮತ್ತು ಅಮಾನತ್ತು ಆದೇಶವನ್ನು ಜಾರಿಗೊಳಿಸಲಾಗಿದೆ. ತನ್ನ ರಕ್ಷಣಾ ಹೇಳಿಕೆಯಲ್ಲಿ ಅವರ ಅನಾರೋಗ್ಯ ಹಾಗೂ ತಾಯಿಯ ಯೋಗಕ್ಷೇಮಕ್ಕಾಗಿ ವಿದೇಶಕ್ಕೆ ಹೋಗಬೇಕಾಯಿತು ಎಂದು ತಿಳಿಸಿರುತ್ತಾರೆ. ಇವರ ಮನವಿ ಹಾಗೂ ಹೇಳಿಕೆಗಳು ಒಂದಕ್ಕೊಂದು ಹೋಲಿಕೆಯಾಗದೆ ಪ್ರಕರಣವನ್ನು ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಭಾವಿಸಿ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರ ಪ್ರಕಾರ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರ ವರದಿಯನ್ನು ಪರಿಶೀಲಿಸಲಾಗಿ ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ ಇವರು ಇಲಾಖಾ ಅನುಮತಿ ಪಡೆಯದೆ ಅನಧಿಕೃತ ಗೈರು ಹಾಜರಾಗಿ ವಿದೇಶದಲ್ಲಿ ನೆಲೆಸಿರುವುದಾಗಿರುತ್ತದೆ. ಸರ್ಕಾರಿ ಸೇವೆಯಲ್ಲಿರುವ ಇವರ ಈ ವರ್ತನೆಯನ್ನು ಗಂಭೀರವಾಗಿ ಪರಿಗಣಿಸಿಕೊಂಡು ಸದರಿ ಶಿಕ್ಷಕರನ್ನು ಕಠಿಣ ದಂಡನೆಗೆ ಗುರಿಪಡಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ, ಸ.ಶಿ., ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನಲ್ಲೂರು, ಕಾರ್ಕಳ ವಲಯ, ಉಡುಪಿ ಜಿಲ್ಲೆ ಇವರು ದಿನಾಂಕ:03.10.2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿ, ಇಲಾಖಾ ಅನುಮತಿ ಇಲ್ಲದೆ ವಿದೇಶದಲ್ಲಿ ನೆಲೆಸಿರುವುದು ಕರ್ನಾಟಕ ನಾಗರೀಕ ಸೇವಾ ನಿಯಮ ಉಲ್ಲಂಘಿಸಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಡಾ॥ ಮಹೀದಾಸ, ಶಿಸ್ತು ಪ್ರಾಧಿಕಾರಿಗಳು/ ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಉಡುಪಿ ಆದ ನಾನು ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪನಿಯಮ viii ರನ್ವಯ ಶ್ರೀ ವಾಲ್‌ಸ್ಟನ್ ಜುವೆನಿಸ್ ಡೇಸಾ, ಸ.ಶಿ., ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನಲ್ಲೂರು, ಕಾರ್ಕಳ ವಲಯ, ಉಡುಪಿ ಜಿಲ್ಲೆ ಇವರನ್ನು ವಿದೇಶದಲ್ಲಿ ನೆಲೆಸಲು ಅನಧಿಕೃತ ಗೈರು ಹಾಜರಾದ ದಿನಾಂಕ:03.10.2006 ರಿಂದ ಅನ್ವಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಲಾಗಿದೆ.

**ಡಾ॥ ಬಿ.ವಿ. ಮಹೀದಾಸ**
ಉಪನಿರ್ದೇಶಕರು, (ಆಡಳಿತ) ಹಾಗೂ ಶಿಸ್ತು ಪ್ರಾಧಿಕಾರಿ,
ಸಾರ್ವಜನಿಕ ಶಿಕ್ಷಣ ಇಲಾಖೆ,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.638

**ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ**

**ಜ್ಞಾಪನ**

**ಸಂ/ಇ3/ಸಿಆರ್/25/2005–06/50, ದಿನಾಂಕ:13ನೇ ಏಪ್ರಿಲ್, 2010**

**ವಿಷಯ:** ಶ್ರೀ ಎಸ್. ನರಸಿಂಹಮೂರ್ತಿ, ಸಶಿ (ಕಲಾ) ಸರ್ಕಾರಿ ಪ್ರೌಢ ಶಾಲೆ, ಗನ್ನಾಯಕನಹಳ್ಳಿ, ಹಿರಿಯೂರು ತಾ: ರವರ ಮೇಲಿನ ಇಲಾಖಾ ವಿಚಾರಣೆಯ ಬಗ್ಗೆ ಅಂತಿಮ ದಂಡನಾ ಆದೇಶ.

**ಉಲ್ಲೇಖ:** 1) ಮುಖ್ಯ ಶಿಕ್ಷಕರು, ಸ.ಪ್ರೌ.ಶಾಲೆ, ಗನ್ನಾಯಕನಹಳ್ಳಿ ರವರ ಪ. ದಿನಾಂಕ:27.06.2005.
2) ಬಿ.ಇ.ಓ., ಹಿರಿಯೂರು ರವರ ಪ.ಸಂ:ಆ7/ದೂರು/46/2005–06, ದಿನಾಂಕ:22.07.2005.
3) ಈ ಕಛೇರಿ ಜ್ಞಾಪನ ಸಮ ಸಂಖ್ಯೆ ದಿನಾಂಕ:24.09.2005.
4) ಬಿ.ಇ.ಓ., ಹಿರಿಯೂರು ರವರ ಪ. ದಿನಾಂಕ:26.10.2005 & 05.04.2006.
5) ಈ ಕಛೇರಿ ಜ್ಞಾಪನ ಸಮ ಸಂ: ದಿನಾಂಕ:29.08.2006.
6) ಶ್ರೀ ಎಸ್.ಆರ್. ರಂಗಸ್ವಾಮಿ, ವಿಪ, ರವರ ವರದಿ ದಿನಾಂಕ:08.09.2006.
7) ಈ ಕಛೇರಿ ತಿಳುವಳಿಕೆ ಪ.ದಿ:27.01.2007.
8) ಈ ಕಛೇರಿ ಆದೇಶ ದಿನಾಂಕ:01.03.2007.
9) ಶ್ರೀ ಕೆ.ಪಿ.ಓಬಯ್ಯ, ವಿಪ. ಹಾಗೂ ವಿಚಾರಣಾಧಿಕಾರಿಗಳ ರವರ ವಿಚಾರಣಾ ವರದಿ ದಿನಾಂಕ:03.01.2009.
10) ಈ ಕಛೇರಿ ಪ.ದಿನಾಂಕ:28.01.2009.
11) ದಿನಾಂಕ:29.01.2009ರ ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಣೆ.
12) ದಿನಾಂಕ:03.02.2009ರಂದು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆ.

ಶ್ರೀ ಎಸ್. ನರಸಿಂಹಮೂರ್ತಿ, ಸಶಿ(ಕಲಾ) ಸರ್ಕಾರಿ ಪ್ರೌಢ ಶಾಲೆ, ಗನ್ನಾಯಕನಹಳ್ಳಿ, ಹಿರಿಯೂರು ರವರು ದಿನಾಂಕ:26.07.2004ರಿಂದ ಆರು ದಿನ ರಜೆ ಹಾಕಿದ್ದು, ನಂತರ ದಿನಾಂಕ:01.08.2004 ರಂದು ಶಾಲಾ ಕೆಲಸಕ್ಕೆ ಹಾಜರಾಗಬೇಕಿತ್ತು. ಆದರೆ ಹಾಜರಾಗಿರುವುದಿಲ್ಲ. ಅಂದರೆ 01.08.2004 ರಿಂದ ಶಾಲಾ ಕೆಲಸಕ್ಕೆ ಹಾಜರಾಗಿರುವುದಿಲ್ಲ ಎಂದು

ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಅವರ ವರದಿಯನ್ನಾಧರಿಸಿದಂತೆ, ಹಿರಿಯೂರು ಬಿ.ಇ.ಓ.ರವರಿಗೆ ಉಲ್ಲೇಖ (3)ರಲ್ಲಿ ಸದರಿ ಶಿಕ್ಷಕರ ಗೈರು ಹಾಜರಿ ಬಗ್ಗೆ ಶಾಲೆಗೆ ಭೇಟಿ ನೀಡಿ ವಾಸ್ತವಾಂಶ ವರದಿ ಮಾಡಲು ತಿಳಿಸಲಾಯಿತು. ಅದರಂತೆ, ಬಿ.ಇ.ಓ. ಹಿರಿಯೂರು ರವರ ಸದರಿ ಶಾಲೆಗೆ ಭೇಟಿ ನೀಡಿ ದಿನಾಂಕ:26.07.2004 ರಿಂದ 31.07.2004 ರವರೆಗೆ ಸಾಂದರ್ಭಿಕ ರಜೆ ಹಾಕಿದ್ದು, ತದನಂತರ ದಿನಾಂಕ:01.08.2004 ರಿಂದ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ದಿನಾಂಕ:05.04.2006ರವರೆಗೆ (ವರದಿ ದಿನಾಂಕದವರೆಗೆ) ಗೈರು ಹಾಜರಿಯಾಗಿರುತ್ತಾರೆ ಎಂದು ವರದಿ ಮಾಡಿ ಸಾಂದರ್ಭಿಕ ರಜೆ ಪತ್ರ ಟೆಲಿಗ್ರಾಮ್ ಪ್ರತಿ ಸಲ್ಲಿಸಿರುತ್ತಾರೆ. ತದನಂತರ ಉಪನಿರ್ದೇಶಕರ ಕಛೇರಿ, ಚಿತ್ರದುರ್ಗ ಕಛೇರಿಯಿಂದ ಶ್ರೀ ಎಸ್.ಆರ್. ರಂಗಸ್ವಾಮಿ, ವಿಪ ರವರನ್ನು ನೇಮಿಸಿ, ಶ್ರೀ ಎಸ್. ನರಸಿಂಹಮೂರ್ತಿ, ಸಶಿ (ಕಲಾ) ರವರು ಅನಧಿಕೃತ ಗೈರು ಹಾಜರಿಯಾಗಿರುವ ಬಗ್ಗೆ ಸಿಬ್ಬಂದಿ ಹಾಜರಿ ವಹಿ, ಮುಖ್ಯ ಶಿಕ್ಷಕ ರವರು ನೀಡಿದ ಮೆಮೋ ಪ್ರತಿಗಳು, ಶಿಕ್ಷಕರ ಸೇವಾ ಮಸ್ತಕ, ಹಾಗೂ ಹಿರಿಯೂರು ಬಿ.ಇ.ಓ. ಕಛೇರಿಯಿಂದ ನೀಡಿದ ಮೆಮೋ ಪ್ರತಿಗಳೊಂದಿಗೆ ವರದಿ ನೀಡಲು ದಿನಾಂಕ:09.08.2006ರಂದು ತಿಳಿಸಲಾಯಿತು. ನಂತರ ಸದರಿ ಅಧಿಕಾರಿಯವರು ಸ.ಪ್ರೌ.ಶಾಲೆ, ಗನ್ನಾಯಕನಹಳ್ಳಿ, ಹಿರಿಯೂರು ತಾ: ಶಾಲೆಗೆ ದಿನಾಂಕ:30.08.2006ರಂದು ಭೇಟಿ ನೀಡಿ ಸದರಿ ಶಿಕ್ಷಕರ ಅನಧಿಕೃತ ಗೈರು ಹಾಜರಿ ಕುರಿತು ಮೇಲೆ ತಿಳಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಸಿಬ್ಬಂದಿ ಹಾಜರಿ ವಹಿಯ ಜೆರಾಕ್ಸ್ ಪ್ರತಿ, ಮುಖ್ಯ ಶಿಕ್ಷಕ ರವರು ನೀಡಿದ ಮೆಮೋಗಳ ಪ್ರತಿಗಳು ಹಾಗೂ ಬಿ.ಇ.ಓ., ಹಿರಿಯೂರು ಕಛೇರಿಯಿಂದ ನೀಡಿದ ಮೆಮೋ ಪ್ರತಿಗಳನ್ನು ಪಡೆದು ದಿನಾಂಕ:08.09.2006ರಂದು ದಾಖಲೆಸಹಿತ ವರದಿ ಮಾಡಿರುತ್ತಾರೆ. ವರದಿಯಲ್ಲಿ ಶ್ರೀ ಎಸ್.ನರಸಿಂಹಮೂರ್ತಿ, ಸಶಿ (ಕಲಾ) ರವರು ದಿನಾಂಕ:26.07.2004 ರಿಂದ 31.07.2004ರವರೆಗೆ ಸಾಂದರ್ಭಿಕ ರಜೆ ಹಾಕಿದ್ದು, ನಂತರ ದಿನಾಂಕ:01.08.2004 ರಿಂದ ಶಾಲಾ ಕೆಲಸಕ್ಕೆ ಈವರೆಗೂ ಅನಧಿಕೃತ ಗೈರು ಹಾಜರಿಯಾಗಿರುತ್ತಾರೆ. ಎಲ್ಲಾ ದಾಖಲೆಯ ದೃಢೀಕೃತ ಪ್ರತಿ ಪಡೆದಿದ್ದು, ಸದರಿ ಶಿಕ್ಷಕರ ಸೇವಾ ಮಸ್ತಕವನ್ನು ಖಾಯಂ ಪೂರ್ವ ಸೇವಾ ಅವಧಿ ಘೋಷಣೆಗೆ ದಿನಾಂಕ:23.06.2004 ರಂದು ಮಾನ್ಯ ಸಹ ನಿರ್ದೇಶಕರು, ಸಾಶಿಇ, ಬೆಂಗಳೂರು ವಿಭಾಗ, ಬೆಂಗಳೂರು ರವರಿಗೆ ಕಳುಹಿಸಿರುವುದಾಗಿ ಮುಖ್ಯ ಶಿಕ್ಷಕರು ತಿಳಿಸಿದ್ದಾರೆ ಎಂದು ವರದಿ ಮಾಡಿರುತ್ತಾರೆ.

ಸದರಿ ಅಧಿಕಾರಿಯವರ ವರದಿನ್ನಾಧರಿಸಿದಂತೆ, ಶ್ರೀ ಎಸ್. ನರಸಿಂಹಮೂರ್ತಿ, ಸಶಿ ರವರು ದಿನಾಂಕ:01.08.2004ರಿಂದ ವರದಿ ಮಾಡುವ ದಿನಾಂಕದವರೆಗೂ ಶಾಲಾ ಕೆಲಸಕ್ಕೆ ನಾಲ್ಕು ತಿಂಗಳಿಗೂ ಹೆಚ್ಚು ಕಾಲ ಅನಧಿಕೃತ ಗೈರು ಹಾಜರಿಯಾಗಿರುತ್ತಾರೆ. ಈ ಶಿಕ್ಷಕರನ್ನು ಗೈರು ಹಾಜರಿ ಅವಧಿಯಲ್ಲಿ ಅಮಾನತ್ತುಗೊಳಿಸಿದರೆ, 50% ವೇತನವನ್ನು ಜೀವನಾಧಾರ ಭತ್ಯೆ ರೂಪದಲ್ಲಿ ನೀಡಬೇಕಾಗುತ್ತದೆ ಎಂಬ ಕಾರಣದ ಅಮಾನತ್ತುಗೊಳಿಸಿರುವುದಿಲ್ಲ. ಆದ್ದರಿಂದ ಸದರಿ ಶಿಕ್ಷಕರ ದೀರ್ಘಕಾಲದ ಅನಧಿಕೃತ ಗೈರು ಹಾಜರಿಯಾಗಿರುವ ಕಾರಣದ ಮೇಲೆ ಸಿಸಿಎ ನಿಯಮ–11 ರಡಿಯಲ್ಲಿ ದೋಷಾರೋಪಣಾಪಟ್ಟಿ ಜಾರಿ ಮಾಡಲು ತೀರ್ಮಾನಿಸಲಾಯಿತು. ಅದರಂತೆ ದಿನಾಂಕ:27.01.2007ರಂದು ಉಲ್ಲೇಖ (7)ರಲ್ಲಿ ದೋಷಾರೋಪಣಾ ಪಟ್ಟಿ ತಯಾರಿಸಿ, ಮುಖ್ಯ ಶಿಕ್ಷಕರ ಮುಖಾಂತರ ಜಾರಿ ಮಾಡಲಾಯಿತು. ಉತ್ತರ ಸಲ್ಲಿಸಲು 15 ದಿನ ಕಾಲಾವಕಾಶ ನೀಡಲಾಗಿತ್ತು. ಎರಡು ತಿಂಗಳು ಕಳೆದರೂ ಯಾವುದೇ ರೀತಿಯ ಉತ್ತರ ಸಲ್ಲಿಸದೇ ಇರುವುದರಿಂದ, ಈ ಪ್ರಕರಣದ ಸತ್ಯಾಸತ್ಯತೆ ಕಂಡುಕೊಳ್ಳುವ ದೃಷ್ಟಿಯಿಂದ ಉಲ್ಲೇಖ (8)ರಲ್ಲಿ ವಿಚಾರಣಾಧಿಕಾರಿ, ಮಂಡನಾಧಿಕಾರಿಯವರನ್ನು ನೇಮಿಸಲಾಯಿತು. ಅದರಂತೆ, ಸಿಸಿಎ ನಿ–11ರಡಿಯಲ್ಲಿ ವಿಚಾರಣೆ ನಡೆಸಿ ಉಲ್ಲೇಖ (9)ರಲ್ಲಿ ವಿಚಾರಣಾ ವರದಿ ನೀಡಿರುತ್ತಾರೆ. ವಿಚಾರಣಾ ವರದಿ ಪರಿಶೀಲಿಸಲಾಗಿ ಸದರಿ ಶಿಕ್ಷಕರಿಗೆ 03 ಭಾರಿ ವಿಚಾರಣಾ ನೋಟೀಸ್ ಬೇರೆ ಬೇರೆ ದಿನಾಂಕಗಳಲ್ಲಿ ಅಂದರೆ 25.06.2007, 16.07.2007, 06.09.2008 ರಂದು ನೋಟೀಸ್ ನೀಡಿರುತ್ತಾರೆ. ಆದರೆ ವಿಚಾರಣೆಗೆ ಪ್ರಾರಂಭದಿಂದಲೂ ಹಾಜರಾಗಿರುವುದಿಲ್ಲ. ಗೈರು ಹಾಜರಿಯಾಗಿರುತ್ತಾರೆ. ಈ ಬಗ್ಗೆ ವಿಚಾರಣಾ ನೋಟೀಸ್‌ಗಳನ್ನು ಅವರ ಸ್ವಂತ ವಿಳಾಸಕ್ಕೆ ಜಾರಿ ಮಾಡಿದ್ದರೂ ವಿಚಾರಣೆಗೆ ಹಾಜರಾಗಿರುವುದಿಲ್ಲ. ಆದ್ದರಿಂದ ಶಿಕ್ಷಕರ ಮೇಲಿನ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿದೆ ಎಂದು ವಿಚಾರಣಾ ವರದಿ ನೀಡಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನಾಧರಿಸಿದಂತೆ, ದಿನಾಂಕ:28.01.2009ರಂದು ವಾರ್ತಾ ಇಲಾಖೆಗೆ ಪತ್ರ ಬರೆದು ದಿನಾಂಕ:26.07.2004 ರಿಂದ ಈವರೆಗೆ ಆರು ವರ್ಷಗಳ ಕಾಲ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವ ಆರೋಪ ಸಾಬೀತಾಗಿದೆ. ಪತ್ರಿಕೆಯಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನದೊಳಗೆ ಅಂತಿಮ ರಕ್ಷಣಾ ಹೇಳಿಕೆ ನೀಡಲು ತಿಳಿಸಲಾಯಿತು. ಹೇಳಿಕೆ ನೀಡಲು ತಪ್ಪಿದಲ್ಲಿ ಅನಧಿಕೃತ ಗೈರು ಹಾಜರಿ ಆರೋಪ ಒಪ್ಪಿಕೊಂಡಿರುವುದಾಗಿ ಭಾವಿಸಿ ಚಾಲ್ತಿ ನಿಯಮಗಳನ್ವಯ ಕ್ರಮ ಜರುಗಿಸಲಾಗುವುದು ಎಂದು ಸಹ ಪ್ರಕಟಿಸಲು ಕೋರಲಾಗಿತ್ತು. ಅದರಂತೆ, ದಿನಾಂಕ:29.01.2009 ರಂದು ರಾಜ್ಯಾದ್ಯಂತ ಪ್ರಕಟವಾಗುವ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾಗಿರುತ್ತದೆ. ಹಾಗೂ

ದಿನಾಂಕ:03.02.2009ರಂದು ಸ್ಥಳೀಯ ದಿನಪತ್ರಿಕೆಯಾದ ಸುದ್ದಿಗಿಡುಗ ಪತ್ರಿಕೆಯಲ್ಲಿ ಪ್ರಕಟವಾಗಿರುತ್ತದೆ. ಪ್ರಕಟಿತ ದಿನಾಂಕದಿಂದ ಈವರೆಗೂ ಯಾವುದೇ ಉತ್ತರ ಸಲ್ಲಿಸಿರುವುದಿಲ್ಲ. ಹಾಗೂ ಶಾಲಾ ಕೆಲಸಕ್ಕೆ ಹಾಜರಿ ಸಹ ಆಗಿರುವುದಿಲ್ಲ. ಈ ಬಗ್ಗೆ ಮುಖ್ಯ ಶಿಕ್ಷಕರು ಸಹ ದಿನಾಂಕ:25.10.2009ರಂದು ಈ ಶಿಕ್ಷಕರ ಅನಧಿಕೃತ ಗೈರು ಹಾಜರಿ ಬಗ್ಗೆ ವರದಿ ಮುಖ್ಯ ಶಿಕ್ಷಕರು ಗ್ರಾಮೀಣ ಪ್ರದೇಶದ ಮಕ್ಕಳ ಕಲಿಕಾ ಅಭಿವೃದ್ಧಿ ಕುಂಠಿತಗೊಳ್ಳಲು ಕಾರಣವಾಗಿದೆ. ಆದ್ದರಿಂದ ಇವರ ಮೇಲೆ ಕ್ರಮ ತೆಗೆದು ಬೇರೊಬ್ಬ ಶಿಕ್ಷಕರನ್ನು ನೇಮಿಸಲು ಕೋರಿರುತ್ತಾರೆ. ಆದ್ದರಿಂದ ಸದರಿ ಶಿಕ್ಷಕರ ದೀರ್ಘಕಾಲದ ಅಂದರೆ ಆರು ವರ್ಷಗಳ ಕಾಲ ಅನಧಿಕೃತ ಗೈರುಆಗಿರುವ ಕಾರಣದ ಮೇಲೆ ಶ್ರೀ ಎಸ್. ನರಸಿಂಹಮೂರ್ತಿ, ಸಶಿ ರವರ ಕರ್ತವ್ಯಲೋಪ, ದುರ್ನಡತೆ ಹಾಗೂ ಕೆಲಸದಲ್ಲಿನ ಅಶ್ರದ್ದೆಯ ಮೇಲೆ ಕೆ.ಸಿ.ಎಸ್.ಆರ್.1957ರ ನಿ–108ಕ್ಕೆ ಅರ್ಹರನ್ನಾಗಿಸಿಕೊಂಡಿರುವ ಕಾರಣದ ಮೇಲೆ ಕೆ.ಸಿ.ಎಸ್.ಆರ್.(ಸಿಸಿಎ) 1957ರ ನಿಯಮಗಳ ಅಡಿಯಲ್ಲಿ ಸರ್ಕಾರಿ ಆದೇಶ ದಿನಾಂಕ:03.06.2005ರಲ್ಲಿ ನೀಡಿದ ಅಧಿಕಾರದಂತೆ, ಹಾಗೂ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳ ಸುತ್ತೋಲೆ ದಿನಾಂಕ:30.06.2005ರಲ್ಲಿ ಸೂಚಿಸಿದಂತೆ, ನೀಡಿರುವ ಅಧಿಕಾರವನ್ನು ಚಲಾಯಿಸಿ ಸೇವೆಯಿಂದ ವಜಾಗೊಳಿಸಬಹುದಾದ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ. ಶಂಕರಪ್ಪ, ಉಪನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿ, ಸಾಶಿಇ, ಚಿತ್ರದುರ್ಗ ಆದ ನಾನು, ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್. ನರಸಿಂಹಮೂರ್ತಿ, ಸಶಿ(ಕಲಾ) ಸರ್ಕಾರಿ ಪ್ರೌಢ ಶಾಲೆ, ಗನ್ನಾಯಕನಹಳ್ಳಿ, ಹಿರಿಯೂರು ತಾ: ರವರು ಶಾಲಾ ಕೆಲಸಕ್ಕೆ (01.08.2004 ರಿಂದ ಈವರೆಗೆ) ದೀರ್ಘಕಾಲದ ಅನಧಿಕೃತ ಗೈರು ಹಾಜರಿಯಾಗಿರುವ ಕಾರಣದ ಮೇಲೆ ಕೆ.ಸಿ.ಎಸ್.ಆರ್.(ಸಿಸಿಎ)–1957ರ ನಿಯಮ 8(Viii) ರಂತೆ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಸದರಿ ಶಿಕ್ಷಕರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಕೆ.ಸಿ.ಎಸ್.ಆರ್.1957ರ ನಿಯಮ 8(14)(ಎ) ರಂತೆ "Dies non" ಎಂದು ಪರಿಗಣಿಸಿ ಆದೇಶಿಸಿದೆ.

**ಕೆ. ಶಂಕರಪ್ಪ**
ಉಪನಿರ್ದೇಶಕರು, (ಆಡಳಿತ) ಹಾಗೂ ಶಿಸ್ತು ಪ್ರಾಧಿಕಾರಿ,
ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ.

ಪಿ.ಆರ್.646

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಶ್ರೀ ರಂಗಪ್ಪ ಬಿನ್ ಕರಿಯಪ್ಪ, ಯಲದಡ್ಲು, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವ ಸ್ಥಿರಾಸ್ತಿಯನ್ನು ಪುನಃ ಸಾಲಗಾರರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಎಆರ್‌ಟಿ/ಎಬಿಎನ್/ಸಿಆರ್–14/ 2001–02, ದಿನಾಂಕ:20.04.2001.
2) ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರದ ದಿನಾಂಕ:08.02.2010.

**ಪ್ರಸ್ತಾವನೆ:**

ಶ್ರೀ ರಂಗಪ್ಪ ಬಿನ್ ಕರಿಯಪ್ಪ, ಯಲದಡ್ಲು, ತುಮಕೂರು ತಾಲ್ಲೂಕು ಇವರ ತುಮಕೂರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ. ತುಮಕೂರು ಈ ಬ್ಯಾಂಕಿನಲ್ಲಿ ಸ್ಥಿರಾಸ್ತಿಯ ಆಧಾರ ಮಾಡಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು, ಒಟ್ಟು ರೂ.89,300–00ಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅಡಿಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:1925/1927–1928 ರಂತೆ ದಾವೆ ಹೂಡಿ ದಿನಾಂಕ:03.10.1998 ಮತ್ತು 28.10.1998 ಪಡೆದು, ತೀರ್ಪಿನ ನಂತರವೂ ಸಹ ಬಾಕಿ ಹಣವನ್ನು ಬ್ಯಾಂಕಿಗೆ ಜಮಾ ಮಾಡದ ಕಾರಣದಿಂದ ಡಿಕ್ರಿ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ:409/99–2000, 34.35/2000–01 ರಂತೆ ಅಮಲ್ಜಾರಿ ಪಡೆದು, ದಿನಾಂಕ:18.05.2000, 27.07.2000 ಮತ್ತು 27.12.2000 ರಂದು ಬಹಿರಂಗ ಹರಾಜಿಗೆ ಬಾರದೇ ಇದ್ದರಿಂದ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು ಉಲ್ಲೇಖ (1)ರಲ್ಲಿ ನಮೂದಿಸಿರುವ ಆದೇಶದ ರೀತ್ಯಾ ತಾಲ್ಲೂಕು ಪ್ರಾಥಮಿಕ

ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರು ಉಲ್ಲೇಖ (2)ರಲ್ಲಿ ನಮೂದಿಸಿರುವ ಪತ್ರದಲ್ಲಿ, ಸಾಲಗಾರರು ದಿನಾಂಕ:30.06.2005ರಂದು ರಸೀತಿ ನಂ.4173 ರ ಪ್ರಕಾರ ಸಾಲ ತೀರುವಳಿ ಮಾಡಿರುತ್ತಾರೆ ಎಂಬುದಾಗಿ ಸಾಲ ತೀರುವಳಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ದಿನಾಂಕ:14.12.2009ರಂದು ನಡೆದು ಆಡಳಿತ ಮಂಡಳಿ ಸಭೆಯ ನಡವಳಿಕೆಯಲ್ಲಿ ಸಾಲಗಾರರು ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ ಸಾಲಗಾರರಾದ ಶ್ರೀ ರಂಗಪ್ಪ ಬಿನ್ ಕರಿಯಪ್ಪ ಯಲದಡ್ಲು, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಲು ಕೋರಿ ತೀರ್ಮಾನಿಸಿರುತ್ತಾರೆ.

ಇವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:20.04.2001ರಂದು ಹೊರಡಿಸಿದ ಆದೇಶದ ಸ್ಥಿರಾಸ್ತಿಗಳನ್ನು ಪುನಃ ವಾಪಾಸ್ಸು ನೀಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಸನಿ–32/ಎಬಿಎನ್/ಸ್ಥಿರಾಸ್ತಿವರ್ಗಾವಣೆ/9/2009–10, ದಿನಾಂಕ:5ನೇ ಏಪ್ರಿಲ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ ಶ್ರೀ ಕೆ. ಗೋಪಾಲರೆಡ್ಡಿ, ಕೆ.ಸಿ.ಎಸ್., ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(ಎ) (15)ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21.11.2001ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಉಪಯೋಗಿಸಿ, ಶ್ರೀ ರಂಗಪ್ಪ ಬಿನ್ ಕರಿಯಪ್ಪ, ಯಲದಡ್ಲು, ತುಮಕೂರು ತಾಲ್ಲೂಕು, ಇವರ ಸ್ಥಿರಾಸ್ತಿಯನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಸ್ಥಿರಾಸ್ತಿಯನ್ನು ಶ್ರೀ ರಂಗಪ್ಪ ಬಿನ್ ಕರಿಯಪ್ಪ, ಯಲದಡ್ಲು, ತುಮಕೂರು ತಾಲ್ಲೂಕು, ಇವರ ಹೆಸರಿಗೆ ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಅನ್ವಯ ನಮೂನೆ 8(ಎ)........... ಪತ್ರದ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:05.04.2010ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ– VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38(ಎ) ನೋಡಿ ಅದರ ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಯಲದಡ್ಲು, ಗ್ರಾಮದ ವಾಸಿಯಾದ ಶ್ರೀ ರಂಗಪ್ಪ ಬಿನ್ ಕರಿಯಪ್ಪ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ ರನ್ವಯ ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:20.04.2001ರಂದು ಈ ಕಛೇರಿ ಆದೇಶದ ಅಡಿಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರಾ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಮರುವರ್ಗಾಯಿಸುವಂತೆ ಬ್ಯಾಂಕಿಗೆ ವ್ಯವಸ್ಥಾಪಕರು ಕೋರಿರುವ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು ಬಾಧ್ಯತೆಗಳು ಶ್ರೀ ರಂಗಪ್ಪ ಬಿನ್ ಕರಿಯಪ್ಪ ಯಲದಡ್ಲು, ತುಮಕೂರು ತಾಲ್ಲೂಕು, ಇವರಿಗೆ ನಷ್ಟವಾಗಿರತಕ್ಕದ್ದು, ಮತ್ತು ಈ ಆದೇಶದಂತೆ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದರಿಂದ ಅಧಿನಿಯಮ 101ರನ್ವಯ ಈ ಪ್ರಮಾಣ ಪತ್ರ ನೀಡಲಾಗಿದೆ.

**ಸ್ಥಿರ ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| 1. ಯಲದಡ್ಲು | 23/3 | 4.00 | ಖುಷ್ಕಿ | ಶ್ರೀ ರಂಗಪ್ಪ ಬಿನ್ ಕರಿಯಪ್ಪ, ಯಲದಡ್ಲು |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.679 ತುಮಕೂರು ಉಪವಿಭಾಗ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂ.ಸಿ.ಎ./ಸಿ.ಆರ್.-14/F.C/2009, ದಿನಾಂಕ : 15ನೇ ಮೇ, 2010**

**ಅರ್ಜಿದಾರರು:**

1. ಶ್ರೀಮತಿ ಅಶ್ವಿನಿ ಎ. ನಾಯಕ್ (34 ವರ್ಷ) W/o ಲೇಟ್ ಅರ್ಜುನ್ ಪಿ. ನಾಯಕ್
2. ಅಂಕಿತಾ ಎ. ನಾಯಕ್ (15 ವರ್ಷ) D/o ಲೇಟ್ ಅರ್ಜುನ್ ಪಿ. ನಾಯಕ್
3. ನಿಖಿತಾ ಎ. ನಾಯಕ್ (13 ವರ್ಷ) D/o ಲೇಟ್ ಅರ್ಜುನ್ ಪಿ. ನಾಯಕ್
4. ವಿನಿತಾ ಎ. ನಾಯಕ್ (11 ವರ್ಷ) D/o ಲೇಟ್ ಅರ್ಜುನ್ ಪಿ. ನಾಯಕ್
5. ಅಂಜಲಿ ಎ. ನಾಯಕ್ (9 ವರ್ಷ) D/o ಲೇಟ್ ಅರ್ಜುನ್ ಪಿ. ನಾಯಕ್
6. ಅನಿಶ್ ಎ. ನಾಯಕ್ (5 ವರ್ಷ) S/o ಲೇಟ್ ಅರ್ಜುನ್ ಪಿ.ನಾಯಕ್
7. ಶ್ರೀಮತಿ ಪಾರ್ವತಿ ಪಿ. ನಾಯಕ್ (60 ವರ್ಷ) W/o ಲೇಟ್ ಪಾಂಡುರಂಗ ಪಿ. ನಾಯಕ್

**ಪ್ರತಿವಾದಿಗಳು**

1) ಶ್ರೀ ಮಾರಿಯೋ ಪಿರೇರ, ಮೆ॥ ಪೌಲೋ ಟ್ರಾವೆಲ್ಸ್, ವಾಸ: 2/1, ರೇಸ್ ಕೋರ್ಸ್ ರೋಡ್, ಜನತಾದಳ ಕಛೇರಿ ಎದುರು, ಮಾಧವ ನಗರ, ಬೆಂಗಳೂರು.

2) ದಿ ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಮರ್ಗಾಂವ್, ಡಿ.ಒ. (141400). ಜಗನ್ನಾಥ್ ಬಿಲ್ಡಿಂಗ್, ರೈಲ್ವೇ ಫ್ಲೈ ಓವರ್ ಹತ್ತಿರ, ಮರ್ಗಾಂವ್, ಗೋವಾ. ಪ್ರತಿನಿಧಿಸುವವರು : ಡಿವಿಜನಲ್ ಆಫೀಸು, ಶ್ರೀರಾಮ್ ಆರ್ಕೇಡ್, ಉಡುಪಿ

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಅಶ್ವಿನಿ ಎ. ನಾಯಕ್ ಇವರು ತಮ್ಮ ಗಂಡನಾದ ಅರ್ಜುನ್ ಪಿ. ನಾಯಕ್ ಇವರು 1ನೇ ಪ್ರತಿವಾದಿಯವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ : 04.02.2010 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ, ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**

ಪಿ.ಆರ್.846

ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಉಡುಪಿ ಜಿಲ್ಲೆ, ಉಡುಪಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ.**

**ನಂ.: ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/231/2010-11, ದಿನಾಂಕ: 22ನೇ ಮೇ, 2010**

**ವಿಷಯ:** ಸಮಾಪನೆಯಲ್ಲಿರುವ ಶ್ರೀ ಗಂಗಾಪರಮೇಶ್ವರಿ ಸಹಕಾರ ಸಂಘ ನಿ., ಶಿವಮೊಗ್ಗ ಇದರ ಪುನಃಶ್ಚೇತನದ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಂಎಸ್/481/2005-06/ದಿನಾಂಕ: 26-9-2005.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ:ಎಆರ್-24/ಸಮಾಪನೆ/ಸಿಆರ್-46/2009-10/50, ದಿನಾಂಕ: 30-3-2010.

ಶ್ರೀ ಗಂಗಾಪರಮೇಶ್ವರಿ ಸಹಕಾರ ಸಂಘ ನಿ., ಶಿವಮೊಗ್ಗ, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. ಎಆರ್/24/ಎಂಕೆಟಿ/1025/1983-84 ದಿನಾಂಕ:21-12-1983ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ಶಿವಮೊಗ್ಗ ನಗರಸಭೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ(1)ರ ಈ ಕಛೇರಿಯ

ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಸಂಘಗಳ ನಿರೀಕ್ಷಕರು ಶಿವಮೊಗ್ಗ ತಾ: ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ಸಮಾಪನಾ ಸಂಘದ ಪ್ರಭಾರವನ್ನು ವಹಿಸಿಕೊಂಡು ಈ ಸಂಘದ ಸದಸ್ಯರಿಗೆ ಸಮಾಪನೆಯಿಂದ ತೊಂದರೆಯಾಗಿದ್ದು., ಅಲ್ಲದೇ ಈ ಸಂಘದಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಅನುಕೂಲತೆ ಇದ್ದು ಪುನಃಶ್ಚೇತನಕ್ಕಾಗಿ ಮನವಿ ಮಾಡಿಕೊಂಡಿರುತ್ತಾರೆ ಹಾಗೂ ದಿನಾಂಕ : 10–3–2010 ರಂದು ಸಮಾಪನಾಧಿಕಾರಿಯವರು ಸಭೆ ನಡೆಸಿ ಪುನಃಶ್ಚೇತನಕ್ಕಾಗಿ ಇಲಾಖೆ ಅಧಿಕಾರಿಯವರನ್ನು ಮನವಿ ಮಾಡಿಕೊಳ್ಳಲು ತೀರ್ಮಾನಿಸಿರುತ್ತಾರೆ. ಈ ಮನವಿಯ ಆಧಾರಿತವಾಗಿ ಉಲ್ಲೇಖ(2)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗರವರು ಸದಸ್ಯರ ಮತ್ತು ಸಮಾಪನಾಧಿಕಾರಿಯವರ ಕೋರಿಕೆಯ ಮೇರೆಗೆ ಪುನಃಶ್ಚೇತನಕ್ಕಾಗಿ ಶಿಫಾರಸ್ ಮಾಡಿರುತ್ತಾರೆ ಹಾಗೂ ಸಮಾಪನಾಧಿಕಾರಿಯವರು ದಿನಾಂಕ : 10–3–2010 ರಂದು ಸಭೆ ನಡೆಸಿ ಪುನಃಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ. ಆದಕಾರಣ ಪ್ರಸ್ತಾವನೆಯನ್ನು ಪರಿಗಣಿಸಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಅಸ್ತಿತ್ವವನ್ನು ಮುಂದುವರೆಸಬೇಕೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ69ಸಿಎಲ್ಎಂ2001 ದಿನಾಂಕ:21–11–2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಿ.ಎನ್.ದೇವರಾಜ್, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಶ್ರೀ ಗಂಗಾಪರಮೇಶ್ವರಿ ಸಹಕಾರ ಸಂಘ ನಿ., ಶಿವಮೊಗ್ಗ, ಇದರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಆದೇಶಿಸಿರುತ್ತೇನೆ.

1) ಷೇರು ಬಂಡವಾಳವನ್ನು 3 ವರ್ಷಗಳಲ್ಲಿ ಹೆಚ್ಚಿಸತಕ್ಕದ್ದು.
2) ಈ ಸಂಘದ ಲೆಕ್ಕಪತ್ರಗಳನ್ನು ತಹಲ್ ವರೆಗೆ ಅಡಿಟ್ ಮಾಡಿಸುವುದು.
3) ಸಂಘದ ಉಪನಿಯಮದ ಉದ್ದೇಶಗಳನ್ನು ಅನುಷ್ಠಾನಗೊಳಿಸುವುದು.
4) ಕಾರ್ಯವ್ಯಾಪ್ತಿಯ ಅರ್ಹರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.
5) ಪುನಃಶ್ಚೇತನಗೊಳಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಆಡಳಿತ ಮಂಡಳಿಯನ್ನು ರಚಿಸಿ ಸಂಘದ ಕಾರ್ಯಾಚರಣೆಯನ್ನು ಪ್ರಾರಂಭಿಸುವುದು ಹಾಗೂ ಪ್ರತಿ ತ್ರೈಮಾಸಿಕಕ್ಕೆ ಸಾಧಿಸಿದ ಪ್ರಗತಿ ವರದಿಯನ್ನು ಇಲಾಖೆಗೆ ಸಲ್ಲಿಸತಕ್ಕದ್ದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿಯ ಪುನರ್ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 22ನೇ ಮೇ 2010 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಸಿ.ಎನ್. ದೇವರಾಜ್**

ಪಿ.ಆರ್.847 ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು – 52**

**ಸಂಖ್ಯೆ : ಯುಬಿಸಿ–3/192/ಸಮಾಪನೆ/2009–10, ದಿನಾಂಕ: 22ನೇ ಮೇ, 2010**

**ವಿಷಯ:** ಸಮಾಪನೆಯಲ್ಲಿರುವ ಸನ್ವಾರಿಯಾ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದರ ನೋಂದಣಿ ಕ್ರಮಾಂಕ ರದ್ದು ಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ : ಯುಬಿಸಿ–3/192/ಸಮಾಪನೆ/2009–10 ದಿನಾಂಕ:4–3–2010

2) ಸಮಾಪಕರು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರ ಪತ್ರ ಸಂಖ್ಯೆ : ಸಅಅ (ಬೆಂಉ)/48/09–10, ದಿನಾಂಕ: 25.3.2010 ಮತ್ತು 3.5.2010

ಸನ್ವಾರಿಯಾ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದು ನೋಂದಣಿ ಕ್ರಮ ಸಂಖ್ಯೆ : ಸನಿ–44/ನೋಂದಣಿ/122–31356/2001–2002 ದಿನಾಂಕ: 2.5.2001 ರಂದು ನೋಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಗೆ ಸೀಮಿತವಾಗಿದೆ. ಸಂಘದ ಕಾರ್ಯಚಟುವಟಿಕೆಗಳು ದಿನೇ ದಿನೇ ಕಡಿಮೆಯಾಗಿದ್ದು ಸಂಘವನ್ನು ನಡೆಸಲು ಸದಸ್ಯರು ಆಸಕ್ತಿ ತೋರದೆ ಇದ್ದು ದಿ : 15.01.2010 ರಂದು ನಡೆದ ವಿಶೇಷ ಸರ್ವ ಸದಸ್ಯರ ಸಭೆಯಲ್ಲಿ ಒಟ್ಟು 500 ಸದಸ್ಯರ ಪೈಕಿ 382 ಜನ ಹಾಜರಾಗಿ ಸಂಘದ ನೋಂದಣಿಯನ್ನು ರದ್ದು ಪಡಿಸಲು ಒತ್ತಾಯಿಸಿದ್ದು ಸರ್ವಾನುಮತದಿಂದ ಸಮಾಪನೆಗೆ ಒಪ್ಪಿಗೆ ಸೂಚಿಸಿದ್ದರು.

ಸಂಘವು ಕಾರ್ಯ ಸ್ಥಗಿತಗೊಂಡಿದ್ದು ಸಂಘವನ್ನು ಪುನಃಶ್ಚೇತನಗೊಳಿಸಲು ಸದಸ್ಯರಿಗೆ ಆಸಕ್ತಿ ಇಲ್ಲದಿದ್ದ ಕಾರಣ 3/4 ರಷ್ಟು ಸದಸ್ಯರು ಸಂಘದ ಸಮಾಪನೆಗೆ ಒಪ್ಪಿದ ಕಾರಣ ದಿ: 4.3.2010 ರಂದು ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಮಾಪಕರನ್ನಾಗಿ ನೇಮಕ ಮಾಡಲಾಗಿತ್ತು.

ಉಲ್ಲೇಖ (2)ರ ದಿನಾಂಕ : 3.5.2010 ರ ಪತ್ರದಲ್ಲಿ ಸಂಘದ ಸಮಾಪಕರು ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಸಂಘದ ಆಸ್ತಿ ಜವಾಬ್ದಾರಿ ಶೂನ್ಯವಾಗಿದ್ದು ಸಂಘಕ್ಕೆ ಸರ್ಕಾರದ ಷೇರುಧನ, ಸಾಲ ಸೌಲಭ್ಯ, ಸಹಾಯಧನ ಇಲ್ಲದಿದ್ದು ಸರ್ಕಾರಕ್ಕೆ ಆಡಿಟ್ ಫಿ ಬಾಕಿ ಇಲ್ಲವೆಂದು ತಿಳಿಸಿದ್ದು ಯಾರಿಗೂ ಕೂಡ ಯಾವುದೇ ವಿಧದಲ್ಲಿ ಬಾಕಿ ಇಲ್ಲವೆಂದು ತಿಳಿಸಿದ್ದು ಸಂಘಕ್ಕೆ ಯಾರಿಂದಲೂ ಬರುವಂತಹ ಮೊತ್ತ ಇರುವುದಿಲ್ಲವೆಂದು ತಿಳಿಸಿದ್ದಾರೆ. ಶೂನ್ಯವಾದ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಕಳುಹಿಸಿದ್ದು ಲೆಕ್ಕ ಪತ್ರಗಳು ಶೂನ್ಯವಾಗಿರುವುದರಿಂದ ದಿನಾಂಕ : 25.3.2010ರ ಸಮಾಪಕರ ಸಭೆಯ ನಡವಳಿಕೆಯನ್ನು ಪರಿಗಣಿಸಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುವುದರಿಂದ ಸದಸ್ಯರಿಗೆ ಯಾವುದೇ ರೀತಿಯಲ್ಲಿ ಪ್ರಯೋಜನಕಾರಿಯಾಗಿಲ್ಲದಿದುದರಿಂದ ಸಮಾಪನೆಯಲ್ಲಿರುವ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ದತ್ತವಾಗಿರುವ ಅಧಿಕಾರದನ್ವಯ ಸನ್ವಾರಿಯಾ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದರ ನೋಂದಣಿ ಸಂಖ್ಯೆ : ಸನಿ–44/ನೋಂದಣಿ/122–31356–2001/2002 ದಿನಾಂಕ : 2.5.2001 ನ್ನು ರದ್ದುಪಡಿಸಲಾಗಿದೆ. ಈ ನೋಂದಣಿ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ಪರಿಪೂರ್ಣ ನಿಂತುಹೋಗಿದೆಯೆಂದು ಸಂಘವು ಅಸ್ಥಿತ್ವದಲ್ಲಿಲ್ಲದೇ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:22–05–2010 ರಂದು ಹೊರಡಿಸಲಾಗಿದೆ.

**ಡಾ: ಹೆಚ್.ವಿ. ಪಾರ್ಶ್ವನಾಥ್**
ಸಹಕಾರ ಸಂಘಗಳ ನಿಬಂಧಕರು
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.850

## ಯುವಜನ ಸೇವಾ ಇಲಾಖೆ

## ತಿದ್ದುಪಡಿ ಆದೇಶ

**ಸಂಖ್ಯೆ : ಯುಸೇಇ 44 ಯುಇಸೇ 08, ಬೆಂಗಳೂರು, ದಿನಾಂಕ : 19ನೇ ಮೇ, 2010**

**ವಿಷಯ:** ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಲೆಕ್ಕಾಧಿಕಾರಿಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ತಿದ್ದುಪಡಿ ಆದೇಶ ಹೊರಡಿಸುವ ಕುರಿತು.

**ಉಲ್ಲೇಖ:** 1) ಇದೇ ಸಮಸಂಖ್ಯೆಯ ಅಧಿಕೃತ ಜ್ಞಾಪನ ಪತ್ರದ ದಿನಾಂಕ : 23–12–2009.

2) ಸಿನಿಯರ್ ಅಕೌಂಟ್ಸ್ ಆಫೀಸರ್, ಮಹಾಲೇಖಪಾಲರ ಕಛೇರಿ, ಇವರ ಪತ್ರ ಸಂಖ್ಯೆ : ಜಿಇ–ಎಕ್ಸ್/ಪಿಎಫ್/ವೈಎಸ್/15/09–10/1570, ದಿನಾಂಕ : 04–02–2010

ಉಲ್ಲೇಖಿತ (1)ರ ಸರ್ಕಾರದ ಅಧಿಕೃತ ಜ್ಞಾಪನದ ಪ್ಯಾರಾ–5ರಲ್ಲಿ ಶ್ರೀ ಬಿ. ಕುಮಾರಸ್ವಾಮಿ, ಲೆಕ್ಕಾಧೀಕ್ಷಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರಿಗೆ ದಿನಾಂಕ: 02–02–2001 ರಂದು ಲೆಕ್ಕಾಧಿಕಾರಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆಯೆಂದು ಆದೇಶಿಸಿದ್ದು, ಅದರ ಬದಲಾಗಿ, ಶ್ರೀ ಬಿ. ಕುಮಾರಸ್ವಾಮಿ, ಲೆಕ್ಕಾಧೀಕ್ಷರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರಿಗೆ ದಿನಾಂಕ : 27–10–2000 ದಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಲೆಕ್ಕಾಧಿಕಾರಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆಯೆಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದೆಂದು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.851

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ

## ಕರ್ನಾಟಕ ಅರಣ್ಯ ಇಲಾಖೆ

## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ ರವರ ನ್ಯಾಯಾಲಯ

**ಸಂಖ್ಯೆ : ಅರಣ್ಯ/ಗುನ್ನೆ/ವಾಹನ/ಮುಟ್ಟುಗೋಲು/2009–10, ಹಳಿಯಾಳ, ದಿನಾಂಕ : 24ನೇ ಮೇ, 2010**

**ವಿಷಯ:** ಅನಧೀಕೃತವಾಗಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಕುರಿತು.

ಹಳಿಯಾಳ ವಿಭಾಗದಲ್ಲಿ ಅನಧೀಕೃತವಾಗಿ ಮರಮಟ್ಟುಗಳ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಸಮಯದಲ್ಲಿ ಗುನ್ನೆಯಲ್ಲಿ ಒಳಗೊಂಡ ಈ ಕೆಳಗಿನ ವಾಹನಗಳನ್ನು ಜಪ್ತಿ ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71ಎದ ಮೇರೆಗೆ ವಿಚಾರಣೆ ನಡೆಯಿಸುವ ಕುರಿತು ಈ ವಿಭಾಗಕ್ಕೆ ಸಂಬಂಧಿಸಿದ ಘಟಕಾಧಿಕಾರಿಗಳು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಈ ಕೆಳಗೆ ನಮೂದಿಸಿದ 1) ಅ.ನಂ. 1 ರಲ್ಲಿ ಜಪ್ತಿಪಡಿಸಿದ ವಾಹನ ಮಾರುತಿ ಓಮಿನಿ KA-28/M-15400 ಇದರ ಮಾಲೀಕರು ಯಾರು ಎಂಬ ಬಗ್ಗೆ ಪತ್ತೆಯಾಗದ ಮೇರೆಗೆ ದಿನಾಂಕ : 20–7–2005 ರಂದು ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು. ಸದರಿ ಪ್ರಕಟಣೆಯನ್ನು ಕಂಡು ಶ್ರೀಮತಿ ಲಕ್ಷ್ಮೀ ಪ್ರಕಾಶ, ಅಂಬಿಕಾನಗರ ಎಂಬುವವರು ಒಂದು ಪತ್ರ ಬರೆದು ತಮಗೆ ವಾಹನವನ್ನು ಬಿಡುಗಡೆಗೊಳಿಸಿ ಕೊಡುವಂತೆ ಪತ್ರ ಬರೆದಿದ್ದರು. ಸದರಿ ವಾಹನದ ಮಾಲೀಕತ್ವದ ಕುರಿತು ದಿನಾಂಕ : 13–03–2007 ಹಾಗೂ 15–10–2007 ರಂದು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬಿಜಾಪುರ ರವರು ದಿನಾಂಕ : 25–10–2007 ರಂದು ಈ ಕಛೇರಿಗೆ ಪತ್ರ ಬರೆದು ಸದರಿ ವಾಹನದ ಕುರಿತು ಪ್ರಾದೇಶಿಕ ಸಾರಿಗೆ ಕಛೇರಿ, ಸಾಂಗ್ಲಿ, ಮಹಾರಾಷ್ಟ್ರ ಇವರನ್ನು ಸಂಪರ್ಕಿಸಲು ಸೂಚಿಸಿದ ಮೇರೆಗೆ ಈ ಕಛೇರಿಯಿಂದ ದಿನಾಂಕ : 29–12–2007 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಂಗ್ಲಿ ರವರಿಗೆ ಪತ್ರ ಬರೆದು ಮಾಹಿತಿ ಸಲ್ಲಿಸುವಂತೆ ಕೋರಲಾಗಿ ಇದೂವರೆಗೆ ವಾಹನದ ಮಾಲೀಕತ್ವದ ಕುರಿತು ತಿಳಿದು ಬಂದಿರುವುದಿಲ್ಲ.

2) ಅ.ನಂ. 2ರಲ್ಲಿ ಜಪ್ತಿ ಪಡಿಸಿದ ವಾಹನ ಜೀಪ್ KA-22/M-3956 ರ ಕುರಿತು ವಾಹನ ಮಾಲೀಕರಾದ ಶ್ರೀ ಪ್ರಮೋದ ಎನ್. ಚವ್ಹಾಣ, ಸಾ: ತೇರಗಾಂವ ಇವರಿಗೆ ಸದರಿ ವಾಹನದ ಕುರಿತು ಕರ್ನಾಟಕ ಅರಣ್ಯ ಕಾಯ್ದೆ 1963 ರಡಿಯಲ್ಲಿ ಸೆಕ್ಷನ್ 71 ಬಿ ನೋಟಿಸ್–1 ದಿನಾಂಕ : 20–09–2008, ನೋಟಿಸ್–2 31–10–2008 ಹಾಗೂ ನೋಟಿಸ್–3 ದಿನಾಂಕ:25–11–2008 ರಂತೆ ಮೂರು ನೋಟೀಸ್ ನೀಡಲಾಗಿಯೂ ಅವರು ಇದೂವರೆಗೆ ಈ ನ್ಯಾಯಾಲಯವನ್ನು ಸಂಪರ್ಕಿಸಿದ್ದು ಇರುವುದಿಲ್ಲ.

3) ಅ. ನಂ. 3ರಲ್ಲಿ ಜಪ್ತಿಪಡಿಸಿದ ಟೆಂಪೋ ಟ್ರ್ಯಾಕ್ಸ್ GA-02/C-6361 ರ ಮಾಲೀಕತ್ವದ ಕುರಿತು ವಲಯ ಅರಣ್ಯಾಧಿಕಾರಿ, ತಿನೈಘಾಟ ರವರು ಸಹಾಯಕ ನಿರ್ದೇಶಕರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಗೋವಾ ರವರಿಗೆ ದಿನಾಂಕ : 17–04–2006 ರಂದು ವಾಹನದ ಮಾಲೀಕತ್ವದ ಕುರಿತು ವರದಿ ನೀಡುವಂತೆ ಪತ್ರ ಬರೆಯಲಾಗಿ ಅದಕ್ಕೆ ಪ್ರತಿಯಾಗಿ ಗೋವಾ ಸಾರಿಗೆ ಅಧಿಕಾರಿಗಳು ದಿನಾಂಕ : 18–10–2007 ರಂದು ಪತ್ರ ಬರೆದು ಮಾಹಿತಿ ನೀಡಿದ ಮೇರೆಗೆ ಈ ಕಛೇರಿಯಿಂದ ದಿನಾಂಕ : 29–12–2007 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂವ ರವರಿಗೆ ಪತ್ರ ಬರೆದು ವಾಹನದ ಮಾಲೀಕತ್ವದ ಕುರಿತು ಕೇಳಲಾಗಿ ಇದೂವರೆಗೆ ಅವರಿಂದ ಯಾವ ಉತ್ತರವೂ ಇಲ್ಲ.

4) ಅ. ನಂ. 4ರಲ್ಲಿ ಜಪ್ತಿ ಪಡಿಸಿದ ಟೆಂಪೋ (ಮೆಟಡೋರ್) KA-22/1195 ರ ಕುರಿತು ಈ ಕಛೇರಿಯಿಂದ ದಿನಾಂಕ : 13–03–2007 ಮತ್ತು 04–04–2008 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂವ ರವರಿಗೆ ವಾಹನದ ಮಾಲೀಕತ್ವದ ಕುರಿತು ವರದಿ ಒಪ್ಪಿಸಲು ಪತ್ರ ಬರೆದು ತಿಳಿಸಲಾಗಿತ್ತು. ಆದರೆ ಇದೂವರೆಗೆ ವಾಹನದ ಮಾಲೀಕತ್ವದ ಕುರಿತು ಮಾಹಿತಿ ಒದಗಿರುವುದಿಲ್ಲ.

5) ಅ. ನಂ. 5ರಲ್ಲಿ ಜಪ್ತಿಪಡಿಸಿದ ವಾಹನ ಆಟೋ ರಿಕ್ಷಾ MH-09/A-2024 ರ ಮಾಲೀಕತ್ವದ ಕುರಿತು ಈ ಕಛೇರಿಯಿಂದ ದಿನಾಂಕ : 20–03–2008 ರಂದು ವಲಯ ಅರಣ್ಯಾಧಿಕಾರಿ, ವಿರ್ನೋಲಿ ರವರಿಗೆ ಪತ್ರ ಬರೆದು ಸಂಬಂಧಿಸಿದ ಸಾರಿಗೆ ಅಧಿಕಾರಿಗಳಿಂದ ಮಾಹಿತಿಯನ್ನು ಪಡೆದು ಸಲ್ಲಿಸುವಂತೆ ಸೂಚಿಸಲಾಗಿದ್ದು ಇದೂವರೆಗೆ ವಾಹನದ ಮಾಲೀಕತ್ವದ ಕುರಿತು ಪತ್ತೆಯಾಗಿರುವುದಿಲ್ಲ.

6) ಅ. ನಂ. 6ರಲ್ಲಿ ಜಪ್ತಿಪಡಿಸಿದ ವಾಹನ ಟೆಂಪೋ ಟ್ರ್ಯಾಕ್ಸ್ KA-27/M-1140 ರ ಮಾಲೀಕರಾದ ಶ್ರೀ ಲಾಲಪ್ಪ ಭೀಮಪ್ಪಾ ತಲಕೇರಿ, ಸಾ: ಗಣೇಶಗುಡಿ ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71ಬಿ ದರಡಿಯಲ್ಲಿ ದಿನಾಂಕ : 09–02–2009, 23–07–2009, 12–08–2009 ರಂತೆ 3 ನೋಟೀಸು ನೀಡಲಾಗಿದ್ದು ವಾಹನ ಮಾಲೀಕರು ಇದೂವರೆಗೂ ಈ ನ್ಯಾಯಾಲಯವನ್ನು ಸಂಪರ್ಕಿಸಿರುವುದಿಲ್ಲ.

7) ಅ. ನಂ. 7ರಲ್ಲಿ ಜಪ್ತಿ ಪಡಿಸಿದ ವಾಹನ ಟೆಂಪೋ ಗೂಡ್ಸ್ KA-22/3614 ರ ಮಾಲೀಕರಾದ ಶ್ರೀ ಜೈಲಾನಿ ಮುಕ್ತುಂಶೇಖ ಕಿತ್ತೂರ, ಸಾ: ಬೀಡಿ, ತಾ: ಖಾನಾಪುರ ಇವರಿಗೆ ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ದಿನಾಂಕ : 07–10–2008, 17–01–2009, 23–05–2009 ರಂದು ಅಧೀಕೃತ ಅಂಚೆ ಮೂಲಕ ನೋಟಿಸನ್ನು ಕಳಿಸಲಾಗಿ ವಾಹನ ಮಾಲೀಕರು ಸದರಿ ನೋಟೀಸನ್ನು ತಿರಸ್ಕರಿಸಿರುತ್ತಾರೆ.

ಮೇಲೆ ಕಾಣಿಸಿದ 7 ವಾಹನಗಳ ವಸ್ತು ಸ್ಥಿತಿ ಪರಿಗಣಿಸಲಾಗಿ ಅ. ನಂ. 2 ರಲ್ಲಿಯ ವಾಹನ ಜೀಪ್ KA-22/M-3956 ಅ. ನಂ. 6 ರಲ್ಲಿಯ ವಾಹನ ಟೆಂಪೋ ಟ್ರ್ಯಾಕ್ಸ್ KA-27/M-1140, ಹಾಗೂ ಅ. ನಂ. 7ರಲ್ಲಿಯ ವಾಹನ ಟೆಂಪೋ ಗೂಡ್ಸ್ KA-22/3614 ವಾಹನಗಳ ಮಾಲೀಕರು ಗುನ್ನೆ ಪ್ರಕರಣಗಳಲ್ಲಿ ಜಪ್ತಿಪಡಿಸಿದ ವಾಹನಗಳು ಗುನ್ನೆಯಲ್ಲಿ ಭಾಗಿಯಾಗಿಲ್ಲವೆಂದು ಸಾಬೀತುಪಡಿಸುವಲ್ಲಿ ಆಸಕ್ತರಿರುವುದಿಲ್ಲ.

ಅ.ನಂ. 1 ವಾಹನ ಮಾರುತಿ ಓಮಿನಿ KA-28/M-1540, ಅ.ನಂ. 3 ರಲ್ಲಿಯ ಟೆಂಪೋ ಟ್ರ್ಯಾಕ್ಸ್ GA-22/C-6361, ಅ.ನಂ. 4 ರಲ್ಲಿಯ ವಾಹನ ಟೆಂಪೋ (ಮೆಟಡೋರ್) KA-22/1195 ಮತ್ತು ಅ.ನಂ. 5 ರಲ್ಲಿಯ ವಾಹನ ಆಟೋ ರಿಕ್ಷಾ MH-09/A-2024 ರಲ್ಲಿಯ ವಾಹನಗಳ ಮಾಲೀಕತ್ವದ ಕುರಿತು ಮಾಹಿತಿಯು ಲಭ್ಯವಾಗಿರುವುದಿಲ್ಲ.

ಕಾರಣ, ಈ ಕೆಳಗೆ ನಮೂದಿಸಿದ ವಾಹನಗಳಿಗೆ ಸಂಬಂಧಿಸಿದ ಮಾಲೀಕರು ತಮ್ಮ ವಾಹನವನ್ನು ಅನಧೀಕೃತವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಬಳಸಿಲ್ಲವೆಂಬುದನ್ನು ಈ ನ್ಯಾಯಾಲಯದ ಮುಂದೆ ಸಾಬೀತುಪಡಿಸಲು ಒಂದು ಅವಕಾಶವನ್ನು ಈ ಮೂಲಕ ನೀಡಲಾಗಿದೆ. ಈ ಕೆಳಗೆ ನಮೂದಿಸಿದ ವಾಹನಗಳ ಮಾಲೀಕರು ಈ ಮೇಲೆ ಹೇಳಿದಂತೆ ತಮ್ಮ ವಾಹನವು ಈ ಗುನ್ನೆಯಲ್ಲಿ ಒಳಗೊಂಡಿಲ್ಲ ಎನ್ನುವ ಕುರಿತು ಸಾಬೀತುಪಡಿಸಲು ವಿಫಲರಾದಲ್ಲಿ ವಾಹನ ಮತ್ತು ಅದರಲ್ಲಿ

ಅನಧೀಕೃತವಾಗಿ ಸಾಗಿಸುತ್ತಿದ್ದ ಅರಣ್ಯ ಉತ್ಪನ್ನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71ಎ ದರ ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಕಾರಣ, ಈ ಪ್ರಕಟಣೆ ಹೊರಡಿಸಿದ 30 ದಿವಸಗಳೊಳಗಾಗಿ ಈ ಮೇಲಿನಂತೆ ಪಾಲಿಸದಿದ್ದಲ್ಲಿ ಇದೇ ಅಂತಿಮ ಆದೇಶವೆಂದು ಪರಿಗಣಿಸಲಾಗುವುದು.

| ಅ. ನಂ. | ವಾಹನದ ವಿವರ | ಎಫ್ಐಆರ್ ನಂ. ಮತ್ತು ದಿನಾಂಕ | ವಶಪಡಿಸಿಕೊಂಡ ಅರಣ್ಯ ಉತ್ಪನ್ನ | ಚೆಸ್ಸಿ ನಂ. | ಇಂಜೀನ್ ನಂ. |
|---|---|---|---|---|---|
| 1 | ಮಾರುತಿ ಓಮಿನಿ KA-28/M-1540 | 4/2004–05 27–01–2005 | ಸಾಗ ಹಲಗೆ 20=0.149 ಘ.ಮೀ. | 910133 | 452510 |
| 2 | ಜೀಪ್ KA-22/M-3956 | 1/2004–05 25–08–2006 | ಸಾಗ ಚೌಕ ನಗ 8=0.457 ಘ.ಮೀ. | 130273 | 3040912 R-4 ITCLS E6 276 |
| 3 | ಟೆಂಪೋ ಟ್ರ್ಯಾಕ್ಸ್ GA-02/C-6361 | 1/2005–06 01–08–2005 | ಸಿಸಂ 13=0.349 ಘ.ಮೀ. | TX-921884 H-94 | 102270-94 |
| 4 | ಟೆಂಪೋ (ಮೆಟಡೋರ್) KA-22/1195 | 1/2006–07 17–09–2009 | ಸಿಸಂ 5=1.113 ಘ.ಮೀ. | 616 TD 715307 | 616 969053928 |
| 5 | ಆಟೋ ರಿಕ್ಷಾ MH-09/A-2024 | 1/2007–08 29–04–2007 | ಸಿಸಂ 5=0.110 ಘ.ಮೀ. | - | - |
| 6 | ಟೆಂಪೋ ಟ್ರ್ಯಾಕ್ಸ್ KA-27/M-1140 | 6/2007–08 31–12–2007 | ಸಿಸಂ ನಗ 7=0.294 ಘ.ಮೀ. | T-55017572 E01 | D-01031060 |
| 7 | ಟೆಂಪೋ ಗೂಡ್ಸ್ KA-22/3614 | 9/2002–03 14–08–2002 | ಸಾಗ ನಗ 23=0.514 ಘ.ಮೀ. | 357010 GVQ 819536 | GVQ 7 46969 |

ಅಧೀಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ

ಪಿ.ಆರ್.852

**OFFICE OF THE DIRECTOR, DEPARTMENT OF MINES AND GEOLOGY,**
**KHANIJA BHAVAN, RACE COURSE ROAD, BANGALORE-1**
**No. DMG: 88/APL-09/2010-11/614 Bangalore, Dated:12th April, 2010**

**Sub:** Consideration of application filed by M/s Sarthak Industries Limited for grant of PL on 22-06-2009 over an area of 492-26 Acres for Iron Ore, Manganese & associated minerals in Chikkabyaladakere village, Hosadurga Taluk, Chitradurga District - reg

**Ref:** 1. PL application No : 88 APL 09 Dated : 22-06-2009
2. This office notice No: DMG/88APL/2009/8516 Date: 29.10.2009.

**Preamble:**

The applications filed by you on 22-06-2009 vide Ref No. 1 for sanction of PL for Iron Ore & Manganese minerals in Chikkabyaladakere village, Hosadurga Taluk Chitradurga District was examined.

On verification it is found that, the above application overlaps with the earlier filed applications. Accordingly the notice was issued under Rule 26(1) of MCR 1960 on 29.10.2009 vide Ref No: (2), as why your application should not be rejected for the above mentioned reason and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated: 27.05.1995 do here by reject the application for grant of PL in favour of M/s Sarthak Industries Limited for the reasons stated above.

DIRECTOR

**OFFICE OF THE DIRECTOR, DEPARTMENT OF MINES AND GEOLOGY,**
**KHANIJA BHAVAN, RACE COURSE ROAD, BANGALORE-1**
**No. DMG: 1565AML-08/2010-11/617 Bangalore, Dated:7th April, 2010**

**Sub:** Consideration of application filed by Sri B.R. Anil for grant of ML on 23-09-2008 over an area of 40-30 Acres for Iron Ore, Manganese minerals in Arehalli village, Hosadurga Taluk, Chitradurga District – reg.

**Ref:** 1. ML application No : 1565 AML 08 Dated : 23-09-2008
2. This office notice No: DMG/MLS/1565/08/1389 Date: 14.05.2009.

**Preamble:**

The application filed by you on 23-09-2008 vide Ref No. 1 for sanction of ML for Iron Ore & Manganese minerals in Arehalli village, Hosadurga Taluk Chitradurga District was examined.

On verification it is found that, the above application overlaps with the earlier filed applications. Accordingly the notice was issued under Rule 26(1) of MCR 1960 on 14.05.2009 vide Ref No: (2), as why your application should not be rejected for the above mentioned reason and you have been directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated: 27.05.1995 do here by reject the application for grant of ML in favour of Sri B.R. Anil for the reasons stated above.

DIRECTOR

**OFFICE OF THE DIRECTOR, DEPARTMENT OF MINES AND GEOLOGY,**
**KHANIJA BHAVAN, RACE COURSE ROAD, BANGALORE-1**
**No. DMG: 1289AML-08/2010-11/620 Bangalore, Dated:7th April, 2010**

**Sub:** Consideration of application filed by Sri B.R. Anil for grant of ML on 31-07-2008 over an area of 60-00 Acres for Iron Ore, Manganese minerals in Guddadaneralekere village, Hosadurga Taluk, Chitradurga District – reg.

**Ref:** 1. ML application No : 1289 AML 08 Dated : 31-07-2008
2. This office notice No: DMG/MLS/1289 AML 2008/3443 Date: 22.06.2009.

**Preamble:**

The application filed by you on 31-07-2008 vide Ref No. 1 for sanction of ML for Iron Ore & Manganese minerals in Guddadaneralekere village, Hosadurga Taluk Chitradurga District was examined.

On verification it is found that, the above application overlaps with the earlier filed application. Accordingly the notice was issued under Rule 26(1) of MCR 1960 on 22.06.2009 vide Ref No: (2), as why your application should not be rejected for the above mentioned reason and you were directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated: 27.05.1995 do here by reject the application for grant of ML in favour of Sri B.R. Anil for the reasons stated above.

DIRECTOR

**OFFICE OF THE DIRECTOR, DEPARTMENT OF MINES AND GEOLOGY, KHANIJA BHAVAN, RACE COURSE ROAD, BANGALORE-1**

**No. DMG: 1352AML-08/2010-11/623 Bangalore, Dated:7th April, 2010**

**Sub:** Consideration of application filed by Sri B.R. Anil for grant of ML on 08-08-2008 over an area of 152-19 Acres for Iron Ore, Manganese minerals in Kennehadlu village, Chitradurga Taluk, Chitradurga District – reg.

**Ref:** 1. ML application No : 1352 AML 08 Dated : 08-08-2008

2. This office notice No: DMG/MLS/1352 AML 08/3439 Date: 01.07.2009.

**Preamble:**

The applications filed by you on 08-08-2008 vide Ref No. 1 for sanction of ML for Iron Ore & Manganese minerals in Kennehadlu village, Chitradurga Taluk Chitradurga District was examined.

On verification it is found that, the above application overlaps with the earlier filed applications. Accordingly the notice was issued under Rule 26(1) of MCR 1960 on 01.07.2009 vide Ref No: (2), as why your application should not be rejected for the above mentioned reason and you were directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated: 27.05.1995 do here by reject the application for grant of ML in favour of Sri B.R. Anil for the reasons stated above.

DIRECTOR

**OFFICE OF THE DIRECTOR, DEPARTMENT OF MINES AND GEOLOGY, KHANIJA BHAVAN, RACE COURSE ROAD, BANGALORE-1**

**No. DMG: 16AML-09/2010-11/629 Bangalore, Dated:7th April, 2010**

**Sub:** Consideration of application filed by M/s Jyotheeshwari Minerals for grant of ML on 02-01-2009 over an area of 259-07 Acres for Iron Ore, Manganese minerals in Bidarabommanahalli village, Chitradurga Taluk, Chitradurga District – reg.

**Ref:** 1. ML application No : 16 AML 09 Dated : 02-01-2009

2. This office notice No: DMG/16 AML 09/10762-63 Date: 05.12.2009.

**Preamble:**

The applications filed by you on 02-01-2009 vide Ref No. 1 for sanction of ML for Iron Ore & Manganese minerals in Bidarabommanahalli village, Chitradurga Taluk Chitradurga District was examined.

On verification it is found that, the above application overlaps with the earlier filed applications. Accordingly the notice was issued under Rule 26(1) of MCR 1960 on 05.12.2009 vide Ref No: (2), as why your application should not be rejected for the above mentioned reason and you were directed to submit your opinion within 30 days from the date of receipt of above notice, but you have failed to reply the same in the stipulated time.

Hence the order:

**ORDER**

I, Sri M. E. Shivalingamurthy IAS, Director Department of Mines and Geology, Bangalore, in exercise of powers delegated Under GO No: CI 03 MMM 95 Dated: 27.05.1995 do here by reject the application for grant of ML in favour of M/s Jyotheeshwari, Minerals for the reasons stated above.

PR-853 DIRECTOR

**URBAN DEVELOPMENT DEPARTMENT**

**NOTIFICATION**

**No.UDD/424/MNX/2007, Bangalore, Dated:7th June, 2010**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Final Notification No.HMA 23 MNJ 1977, dated: 30-11-1977 was published in the Karnataka Gazette dated:08-12-1977 in Part-III-I under sub-section(1) of Section-19 of BDA Act 1976 (Karnataka Act-12 of 1976) for formation of layout Called "EXTENSION OF MATADAHALLI LAYOUT''.

**SCHEDULE**

**DISTRICT**:**BANGALORE** **TALUK**: **BANGALORE-NORTH** **VILLAGE:GANGENAHALLI**

| Sl. No. | Name of the Khatedar/Anubhavadar Sri/Smt. | Sy.No. | Dry/Wet/ Garden | Total Extent | Kharab | Remain ing Extent | Asses sment | Extent Acquire d | Extent with drawn | East Sy.No | West Sy. No. | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | G.Thimmareddy | 7/1B | Dry | 0-17 | - | 0-17 | 0-40 | 0-17 | **0-17** | 7/2 | 18 | 7/1C | 7/1A |
| 2. | T.Nagappa | 7/1C | Dry | 0-17 | - | 0-17 | 0-40 | 0-17 | **0-17** | 7/2 | 18 | 7/1D | 7/1B |
| 3. | Muniswamappa | 7/1D | Dry | 0-17 | - | 0-17 | 0-40 | 0-17 | **0-17** | 7/2 | 18 | 6 | 7/1C |
| | | | | | | | | | **1-11** | | | | |

**TOTAL EXTENT WITH DRAWN 01 ACRES 11 GUNTAS (One Acres and Eleven Guntas Only)**

**Note:**Orders issued in Government letter No.UDD 576 MNX 1998, dated.8-10-1999 for developing the said lands under Group Housing Scheme stands cancelled.

By Order and in the name of the Governor of Karnataka

**M.S.PREMACHANDRA**

Under Secretary to Government

Urban Development Department.

PR-906